KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ


ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಆಗಸ್ಟ್ ೨, ೨೦೦೭ (ಶ್ರಾವಣ ೧೧, ಶಕ ವರ್ಷ ೧೯೨೯) | ಸಂಚಿಕೆ ೩೧ |
|---|---|---|


## ಭಾಗ–೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2006–07ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಅನುದಾನ 4 ಜಿಲ್ಲಾ ಪಂಚಾಯತಿಗಳಲ್ಲಿ ಪ್ರಸ್ತಾವನೆಯನ್ನು ತಡವಾಗಿ ಸಲ್ಲಿಸಿದಕ್ಕಾಗಿ ಕಡಿತಗೊಳಿಸಿದ್ದ ಅನುದಾನವನ್ನು ಪೂರ್ವ ಸ್ಥಿತಿಗೆ ತಂದು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ–12022:1:2006 ಎಸ್‌ಜಿಎಸ್‌ವೈ (10) ದಿನಾಂಕ: 02.05.2006, (48) ದಿನಾಂಕ: 27.11.2006 ಎಸ್‌ಜಿಎಸ್‌ವೈ (54) ದಿನಾಂಕ: 05.12.2006, (66) ದಿನಾಂಕ: 14.12.2006, (83) ದಿನಾಂಕ: 21.12.2006 ಮತ್ತು (102) ದಿನಾಂಕ: 09.01.2007 ಹಾಗೂ (122) ದಿನಾಂಕ: 24.01.2007, (125) ದಿನಾಂಕ: 01.02.2007, (220) ದಿನಾಂಕ: 26.3.2007 ಮತ್ತು (221) ದಿನಾಂಕ: 26.03.2007.
2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 20 ಎಸ್‌ಜೆವೈ 2006, ದಿನಾಂಕ: 19.05.2006, 25.01.2007, 03.02.2007, 22.02.2007, 23.02.2007, 09.03.2007 ಮತ್ತು 19.05.2007.
3) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 11 ಎಸ್‌ಜೆವೈ 2007 ದಿನಾಂಕ: 27.02.2007.
4) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ–12022:1:2006 ಎಸ್‌ಜಿಎಸ್‌ವೈ (236) ದಿನಾಂಕ: 30.03.2007.

**ಪ್ರಸ್ತಾವನೆ:**

ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಮೇಲೆ ಓದಲಾದ (1) ಮತ್ತು (2) ರಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಮೊದಲನೇ ಕಂತಿನ ಅನುದಾನ ರೂ.22,22,51,000 ಮತ್ತು ರೂ.7,40,85,000 ಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಹಾಗೂ ಎರಡನೆ ಕಂತಿನ ಕೇಂದ್ರದ ಅನುದಾನ ರೂ.16,87,26,000 ಮತ್ತು ರೂ.5,62,42,000 ಗಳನ್ನು 26 ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರ ಉತ್ತರ ಕನ್ನಡ ಜಿಲ್ಲೆಗೆ ಎರಡನೇ ಕಂತಿನ ಅನುದಾನ ರೂ.43,48,000 ಗಳನ್ನು ಹಾಗೂ 10 ಜಿಲ್ಲಾ ಪಂಚಾಯತಿಗಳಲ್ಲಿ 01.04.2006 ರಲ್ಲಿ ಹೆಚ್ಚಿನ ಆರಂಭ ಶಿಲ್ಕಿಗಾಗಿ ಕಡಿತಗೊಳಿಸಿದ್ದ ಅನುದಾನವನ್ನು ಪೂರ್ವ ಸ್ಥಿತಿಗೆ (restoration of cut) ತಂದು ರೂ.2,04,19,000 ಗಳನ್ನು ಬಿಡುಗಡೆ ಮಾಡಿದೆ. ಈ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ರೂ.82,56,000 ರಾಜ್ಯದ 11 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ.

ಕೇಂದ್ರ ಸರ್ಕಾರ ಓದಲಾದ (4) ರಲ್ಲಿ ನಾಲ್ಕು ಜಿಲ್ಲಾ ಪಂಚಾಯತಿಗಳಿಗೆ ಪ್ರಸ್ತಾವನೆಯನ್ನು ತಡವಾಗಿ ಸಲ್ಲಿಸಿದಕ್ಕಾಗಿ ಕಡಿತಗೊಳಿಸಿದ (restoration of cut) ಅನುದಾನವನ್ನು ಪೂರ್ವ ಸ್ಥಿತಿಗೆ ತಂದು ರೂ.27,90,000 ಗಳನ್ನು ಚಿತ್ರದುರ್ಗ,

ಗುಲ್ಬರ್ಗಾ, ಹಾವೇರಿ ಮತ್ತು ಶಿವಮೊಗ್ಗ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ. ಓದಲಾದ (4)ರ ಅನುದಾನ ಬಿಡುಗಡೆ ಪತ್ರ ರಾಜ್ಯ ಸರ್ಕಾರಕ್ಕೆ ದಿನಾಂಕ: 04.05.2007 ರಂದು ಸ್ವೀಕೃತವಾಗಿದೆ. ಆದುದರಿಂದ 2007–08ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಿಂದ 4 ಜಿಲ್ಲಾ ಪಂಚಾಯತಿಗಳಿಗೆ ರೂ.9,30,000 ರಾಜ್ಯ ಸರ್ಕಾರ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 20 ಎಸ್‌ಜೆವೈ 2006, ಬೆಂಗಳೂರು, ದಿನಾಂಕ: 21ನೇ ಜೂನ್ 2007**

2006–07ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ರೂ.9,30,000 (ರೂ.ಒಂಬತ್ತು ಲಕ್ಷದ ಮೂವತ್ತು ಸಾವಿರ ಮಾತ್ರ) ಗಳನ್ನು 4 ಜಿಲ್ಲಾ ಪಂಚಾಯತ್‌ಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಪೂರ್ವಸ್ಥಿತಿಗೆ ತಂದು ಬಿಡುಗಡೆ ಮಾಡಿರುವ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|
| 1 | ಚಿತ್ರದುರ್ಗ | 403 | 1600ZZ0001 | 6,14,000 | 2,05,000 |
| 2 | ಗುಲ್ಬರ್ಗಾ | 417 | 3200ZZ0003 | 10,22,000 | 3,40,000 |
| 3 | ಹಾವೇರಿ | 463 | 2700ZZ0001 | 5,36,000 | 1,79,000 |
| 4 | ಶಿವಮೊಗ್ಗ | 405 | 1400ZZ0002 | 6,18,000 | 2,06,000 |
| | ಒಟ್ಟು | | | **27,90,000** | **9,30,000** |

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದಲ್ಲಿ ನಡುವೆ 75 : 25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2007–2008 (2501–01–198–6–01) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜಡ್‌ಪಿಎ 2003, ದಿನಾಂಕ: 14.07.2005 ರನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್‌ಜೆವೈ 2007, ದಿನಾಂಕ: 18.04.2007 ರಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

2007–2008ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 7ನೇ ತಾರೀಖಿನೊಳಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಕ್ಕೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 235 ಪಿಬಿಎಸ್ 2007, ದಿನಾಂಕ: 19.06.2007 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಶ್ಮಿ ಮಹೇಶ್**

ಪಿ.ಆರ್. 1279

ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಶ್ರೀ ಬಿ.ಎಫ್.ತಳವಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 87 ಎಸ್‌ಇಎನ್ 02 ದಿ:09.12.05.

2) ಶ್ರೀ ಬಿ.ಎಫ್.ತಳವಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ದಿ:21.02.06ರ ಉತ್ತರ.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆ, ಚೆನ್ನಗಿರಿ ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚೆನ್ನಗಿರಿ ತಾಲ್ಲೂಕು, ಜಯಂತಿ ಗ್ರಾಮದ ಶ್ರೀ ರಾಜಪ್ಪ ಬಿನ್ ಹಾಲಪ್ಪ ಹಾಗೂ ಹಾಲಪ್ಪ ಬಿನ್ ರಾಮಪ್ಪ ಎಂಬುವವರಿಗೆ ಜಾತಿ ಪ್ರಮಾಣ ಪತ್ರ ನೀಡುವಾಗ ಅನುಸರಿಸಬೇಕಾದ ಕಾರ್ಯವಿಧಾನವನ್ನು ಪಾಲಿಸದೇ ಗ್ರಾಮ ಲೆಕ್ಕಿಗರವರು ನೀಡಿದ ವರದಿಯ ಆಧಾರದ ಮೇಲೆ ಸದರಿಯವರು ಹಿಂದುಳಿದ ಉಪ್ಪಾರ ಜಾತಿಗೆ ಸೇರಿದವರಾಗಿದ್ದರೂ ಪರಿಶಿಷ್ಟ ಪಂಗಡದ ನಾಯಕ ಜಾತಿ ಎಂದು ಪ್ರಮಾಣ ಪತ್ರ ನೀಡಿದ ಆರೋಪಕ್ಕಾಗಿ ಶ್ರೀ ಬಿ.ಎಫ್.ತಳವಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿ:09.12.05ರ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಆರೋಪಿತರು ಮೇಲೆ (2)ರಲ್ಲಿ ಓದಲಾದ ದಿ:21.02.06ರ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪವನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 87 ಎಸ್‌ಇಎನ್ 02 ಬೆಂಗಳೂರು ದಿನಾಂಕ: 25ನೇ ಜೂನ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಎಫ್.ತಳವಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪದ ಕುರಿತು ವಿಚಾರಣೆ ಮಾಡಲು ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಳಗಾಂ ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ತಹಶೀಲ್ದಾರ್, ಚೆನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1197

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಬಿ.ಸಿ.ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನೇಮಕಗೊಂಡ ವಿಚಾರಣಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ-ಪರಿಷ್ಕೃತ ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್‌ಇಎನ್ 05 ದಿನಾಂಕ:30.09.2006.

2) ಶ್ರೀ ಟಿ.ಸಂತಾನಂ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ರವರ ದಿ:07.05.07ರ ಪತ್ರ.

**ಪ್ರಸ್ತಾವನೆ:**

ಶ್ರೀ ಬಿ.ಸಿ.ಮುಧೋಳ್, ಮುಖ್ಯ ಇಂಜಿನಿಯರ್ ರವರು ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರದಲ್ಲಿ ದಿ:01.03.03 ರಿಂದ 22.10.03ರವರೆಗೆ ಮುಖ್ಯ ಇಂಜಿನಿಯರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಾಧಿಕಾರದ ವ್ಯಾಪ್ತಿಯಲ್ಲಿ 300 ಕಾಮಗಾರಿಗಳನ್ನು ಅವುಗಳ ಅಂದಾಜು ಪಟ್ಟಿಯನ್ನು ಸಿದ್ದಪಡಿಸದೆ ತಮಗೆ ಬೇಕಾದ ಕಂಟ್ರಾಕ್ಟರುಗಳಿಗೆ ನೀಡಿ ಅವುಗಳು ಪೂರ್ಣಗೊಳ್ಳದೆ ಅರ್ಧಕ್ಕೆ ನಿಂತಿದ್ದರೂ ಸಹ ಅವುಗಳ ಗುಣಮಟ್ಟ ಅಳೆಯದೇ ಪೂರ್ಣ ಹಣ ಪಾವತಿ ಮಾಡಿದ್ದು, ಆಲಮ್ ಕ್ಲೋರಿನ್ ಮತ್ತು ಪ್ರಾಧಿಕಾರಕ್ಕೆ ಅವಶ್ಯಕತೆಗಿಂತ ಹೆಚ್ಚಾಗಿ ವಾಟರ್ ಮೀಟರ್ ಖರೀದಿಯಲ್ಲಿ ಅವ್ಯವಹಾರ ಎಸಗಿ ಕರ್ನಾಟಕ ಪಾರದರ್ಶಕ ನಿಯಮಗಳನ್ನು ಪಾಲಿಸದೆ ಸರ್ಕಾರದ ಹಣವನ್ನು ದುರುಪಯೋಗಪಡಿಸಿರುವ ಆರೋಪಗಳಿಗಾಗಿ ಶ್ರೀ ಬಿ.ಸಿ.ಮುಧೋಳ್ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಮೇಲೆ(1) ರಲ್ಲಿ ಓದಲಾದ ದಿನಾಂಕ:30.09.06ರ ಸರ್ಕಾರದ ಆದೇಶದಲ್ಲಿ ಶ್ರೀ ಟಿ.ಸಂತಾನಂ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿಯೂ, ಶ್ರೀಮತಿ ಹೇಮಲತ, ಜನರಲ್ ಮ್ಯಾನೇಜರ್, ಆರ್ ಅಂಡ್ ಆರ್ ಅಪ್ಪರ್ ಕೃಷ್ಣ ಪ್ರಾಜೆಕ್ಟ್, ಬಾಗಲಕೋಟೆ ರವರನ್ನು ಮಂಡನಾಧಿಕಾರಿಯಾಗಿಯೂ ನೇಮಿಸಲಾಗಿತ್ತು. ಆದರೆ, ಶ್ರೀ ಟಿ.ಸಂತಾನಂ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ತಮ್ಮ ಅನಾರೋಗ್ಯದ ನಿಮಿತ್ತ ವಿಚಾರಣೆ ಮುಂದುವರಿಸಲು ಸಾಧ್ಯವಿಲ್ಲವೆಂದು

ಮೇಲೆ(2)ರಲ್ಲಿ ಓದಲಾದ ದಿ:07.05.07ರ ಪತ್ರದಲ್ಲಿ ತಿಳಿಸಿರುತ್ತಾರೆ. ಈ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳನ್ನು ಬದಲಾವಣೆ ಮಾಡಲು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್‌ಇಎನ್ 2005 ಬೆಂಗಳೂರು ದಿನಾಂಕ: 8ನೇ ಜೂನ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಹಾಗೂ ಕೆ.ಸಿ.ಎಸ್.ಆರ್. 214ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಆದೇಶ ದಿನಾಂಕ:30.09.06ರಲ್ಲಿ ಶ್ರೀ ಟಿ.ಸಂತಾನಂ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದ ಆದೇಶವನ್ನು ಈ ಮೂಲಕ ರದ್ದುಗೊಳಿಸುತ್ತಾ, ಅವರ ಬದಲಿಗೆ ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ:23.08.05ರಂತೆ ರೂ.6000/- (ಆರು ಸಾವಿರ ರೂಪಾಯಿಗಳು ಮಾತ್ರ)ಗಳ ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:4.3.2002 ರಂತೆ ರೂ.1000/- (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಸರ್ಕಾರವು ಶ್ರೀಮತಿ ಹೇಮಲತ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಉಡುಪಿ ಇವರನ್ನೇ ಮಂಡನಾಧಿಕಾರಿಯನ್ನಾಗಿ ಮುಂದುವರಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಕಂದಾಯ ಇಲಾಖೆಯು ಕ್ರಮ ಕೈಗೊಳ್ಳುವುದು. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1180

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ಕಂದಾಯ ಸಚಿವಾಲಯ**

**ವಿಷಯ:** ಕೇಂದ್ರ ಮೌಲ್ಯ ಮಾಪನ ಸಮಿತಿಯ ಪುನರ್ ರಚನೆ ಬಗ್ಗೆ.

**ಓದಲಾಗಿದೆ:** ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ದಿನಾಂಕ: 07.06.2007ರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 07.06.2007ರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರದಲ್ಲಿ 1957ರ ಕರ್ನಾಟಕ ಮುದ್ರಾಂಕ ಕಾಯ್ದೆಯ ವಿಧಿ 45ಬಿ ಮತ್ತು ಅದರಡಿಯಲ್ಲಿ ರಚಿಸಲಾದ 2003ರ ಮುದ್ರಾಂಕ ನಿಯಮಗಳ, ನಿಯಮ 3ರ ಪ್ರಕಾರ ಕೇಂದ್ರ ಮೌಲ್ಯಮಾಪನ ಸಮಿತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಕಂಇ 206 ಮುನೋಮು 2006 ದಿನಾಂಕ: 18.01.2007ರ ಪ್ರಕಾರ 30.05.2005 ರಿಂದ ಜಾರಿಗೆ ಬರುವಂತೆ ಪುನರ್ ರಚಿಸಲಾಗಿತ್ತು. ಸದರಿ ಸಮಿತಿಯ ಅವಧಿಯು ದಿನಾಂಕ: 29.05.2007ಕ್ಕೆ ಕೊನೆಗೊಂಡಿದೆ. ಆದ್ದರಿಂದ ಸಮಿತಿಯನ್ನು ಪುನಃ ಹೊಸದಾಗಿ ರಚಿಸುವುದು ಅವಶ್ಯವಾಗಿರುವುದರಿಂದ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಅಧ್ಯಕ್ಷತೆಯಲ್ಲಿ ವಿವಿಧ ಇಲಾಖೆಗಳ ಮುಖ್ಯಸ್ಥರು ಮತ್ತು ಸರ್ಕಾರದಿಂದ ರಚಿತವಾದ ಸಂಸ್ಥೆಗಳ ಮುಖ್ಯಸ್ಥರನ್ನೊಳಗೊಂಡಂತೆ ಕೇಂದ್ರ ಮೌಲ್ಯ ಮಾಪನ ಸಮಿತಿಯನ್ನು ಪುನರ್ ರಚಿಸುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 239 ಮುನೋಮು 2007, ಬೆಂಗಳೂರು, ದಿನಾಂಕ: 5ನೇ ಜುಲೈ 2007**

1957 ಕರ್ನಾಟಕ ಮುದ್ರಾಂಕ ಕಾಯ್ದೆಯ ವಿಧಿ 45ಬಿ ಅಡಿಯಲ್ಲಿ ರಚಿಸಲಾದ ಕರ್ನಾಟಕ ಮುದ್ರಾಂಕ (ಕೇಂದ್ರೀಯ ಮೌಲ್ಯ ಮಾಪನ ಸಮಿತಿ ರಚನೆ ಸ್ವತ್ತುಗಳ ಬಜಾರು ಧಾರಣೆಯ ಮಾರ್ಗಸೂಚಿಯ ನಿಗದಿ ಮತ್ತು ಪ್ರಕಟಣೆ), ನಿಯಮಾವಳಿ 2003ರ ನಿಯಮ 3 ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ ಉಪ ನಿಯಮ (2)ರ ಷರತ್ತಿಗೊಳಪಟ್ಟು ಸರ್ಕಾರವು ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಕೇಂದ್ರ ಮೌಲ್ಯ ಮಾಪನ ಸಮಿತಿಯನ್ನು ಪುನರ್‌ರಚಿಸಿ ಆದೇಶಿಸಲಾಗಿದೆ.

| | | |
|---|---|---|
| 1 | ನೋಂದಣಿ ಮಹಾ ಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು | ಅಧ್ಯಕ್ಷರು |
| 2 | ನೋಂದಣಿ ಉಪ ಮಹಾ ಪರಿವೀಕ್ಷಕರು (ಆಡಳಿತ ಮತ್ತು ಕಾನೂನು), ಮುದ್ರಾಂಕ ಮತ್ತು ನೋಂದಣಿ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |
| 3 | ಆಯುಕ್ತರು/ಜಂಟಿ ಆಯುಕ್ತರು (ಕಂದಾಯ), ಬೆಂಗಳೂರು ಬೃಹತ್ ಮಹಾನಗರ ಪಾಲಿಕೆ, ಬೆಂಗಳೂರು. | ಸದಸ್ಯರು |
| 4 | ನಿರ್ದೇಶಕರು/ಜಂಟಿ ನಿರ್ದೇಶಕರು, ಪೌರಾಡಳಿತ, ಬೆಂಗಳೂರು. | ಸದಸ್ಯರು |
| 5 | ನಿರ್ದೇಶಕರು/ಅಪರ ನಿರ್ದೇಶಕರು, ನಗರ ಯೋಜನೆ, ಬೆಂಗಳೂರು. | ಸದಸ್ಯರು |

| | | |
|---|---|---|
| 6 | ನಿರ್ದೇಶಕರು/ಜಂಟಿ ನಿರ್ದೇಶಕರು (Inspection & Enquiry) ಭೂ ದಾಖಲೆ ಮತ್ತು ಭೂ ಮಾಪನ, ಬೆಂಗಳೂರು. | ಸದಸ್ಯರು |
| 7 | ಜಿಲ್ಲಾಧಿಕಾರಿಗಳು/ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು (ನಗರ) ಜಿಲ್ಲೆ, ಬೆಂಗಳೂರು. | ಸದಸ್ಯರು |
| 8 | ಜಿಲ್ಲಾಧಿಕಾರಿಗಳು, ಬೆಂಗಳೂರು (ಗ್ರಾಮಾಂತರ) ಜಿಲ್ಲೆ, ಬೆಂಗಳೂರು. | ಸದಸ್ಯರು |
| 9 | ಅಧ್ಯಕ್ಷರು / ಉಪಾಧ್ಯಕ್ಷರು, ಎಫ್.ಕೆ.ಸಿ.ಸಿ.ಐ., ಬೆಂಗಳೂರು. | ಸದಸ್ಯರು |
| 10 | ಅಧ್ಯಕ್ಷರು, ಇನ್ಸ್ಟಿಟ್ಯೂಟ್ ಆಫ್ ಚಾರ್ಟರ್ಡ್ ವ್ಯಾಲ್ಯೂಯರ್ಸ್, ಬೆಂಗಳೂರು. | ಸದಸ್ಯರು |
| 11 | ಅಧ್ಯಕ್ಷರು, ಕರ್ನಾಟಕ ಅಪಾರ್ಟ್‌ಮೆಂಟ್ & ಓನರ್ಸ್ ಅಸೋಸಿಯೇಷನ್, ಬೆಂಗಳೂರು. | ಸದಸ್ಯರು |
| 12 | ಮುಖ್ಯ ಅಭಿಯಂತರರು/ಉಪ ಮುಖ್ಯ ಅಭಿಯಂತರರು, (ಕಟ್ಟಡಗಳು), ಲೋಕೋಪಯೋಗಿ ಇಲಾಖೆ, ಬೆಂಗಳೂರು. | ಸದಸ್ಯರು |
| 13 | ಡೈರೆಕ್ಟರ್ ಜನರಲ್/ಅಡಿಷನಲ್ ಡೈರೆಕ್ಟರ್ (ಯೂನಿಟ್-1, ರೆವಿನ್ಯೂ), ವರಮಾನ ತೆರಿಗೆ ಇಲಾಖೆ, ಬೆಂಗಳೂರು. | ಸದಸ್ಯರು |
| 14 | ಆಯುಕ್ತರು, ಬಿ.ಎಂ.ಆರ್.ಡಿ.ಎ., ಬೆಂಗಳೂರು. | ಸದಸ್ಯರು |
| 15 | ಆಯುಕ್ತರು/ಕಾರ್ಯದರ್ಶಿಗಳು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು. | ಸದಸ್ಯರು |
| 16 | ಚೀಫ್ ಎಕ್ಸಿಕ್ಯೂಟಿವ್ ಆಫೀಸರ್ & ಎಕ್ಸಿಕ್ಯೂಟಿವ್ ಮೆಂಬರ್, ಕೆ.ಐ.ಎ.ಡಿ.ಬಿ., ಬೆಂಗಳೂರು. | ಸದಸ್ಯರು |
| 17 | ಜಿಲ್ಲಾ ನೋಂದಣಾಧಿಕಾರಿಗಳು (ಅಪಮೌಲ್ಯ ತನಿಖಾ ವಿಭಾಗ) ಆಯಾ ಜಿಲ್ಲೆಗೆ ಸಂಬಂಧಿಸಿದಂತೆ. | ಸದಸ್ಯರು |
| 18 | ರಾಜ್ಯ ಮಟ್ಟದ ಬ್ಯಾಂಕರ್ಸ್ ಸಮಿತಿಯ ಪ್ರತಿನಿಧಿಗಳು, ಬೆಂಗಳೂರು. | ಸದಸ್ಯರು |
| 19 | ಆರ್ಕಿಟೆಕ್ಟ್ ಅಸೋಸಿಯೇಷನ್‌ನ ಪ್ರತಿನಿಧಿಗಳು, ಬೆಂಗಳೂರು. | ಸದಸ್ಯರು |
| 20 | ಶ್ರೀ ಎಂ.ಸಿ. ಶಾಂತಮೂರ್ತಿ, ಗೌರವ ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳ ಸಂಸ್ಥೆ, 1ನೇ ಮಹಡಿ, ಗಾಂಧಿಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು-1. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಫ್. ಯರಗೊಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1281

## ಸಮಾಜ ಕಲ್ಯಾಣ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಸಕಇ 47 ಎಸ್ಎಡಿ 2005, ಬೆಂಗಳೂರು, ದಿನಾಂಕ: 30ನೇ ಜೂನ್ 2007**

**ವಿಷಯ:** ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ 1990 ಮತ್ತು ನಿಯಮಗಳು 1992 ಇವುಗಳು ಜಾರಿ ಬರುವುದಕ್ಕೆ ಹಿಂದೆ ನೀಡಲಾದ ಜಾತಿ ಪ್ರಮಾಣ ಪತ್ರಗಳ ಸತ್ಯಶೀಲತೆಯನ್ನು ಪರಿಶೀಲಿಸುವ ಬಗ್ಗೆ ಆದೇಶ.

ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ 1990 ಇದು ದಿನಾಂಕ: 01.06.1992 ರಿಂದ ಜಾರಿಗೆ ಬಂದಿದೆ ಮತ್ತು ಅದರಡಿ ರಚಿಸಲಾದ ನಿಯಮಗಳು ದಿನಾಂಕ: 22.04.1993 ರಿಂದ ಜಾರಿಗೆ ಬಂದಿವೆ.

ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) (ತಿದ್ದುಪಡಿ) ಅಧಿನಿಯಮ 1997 ದಿನಾಂಕ: 07.01.2000 ದಿಂದ ಜಾರಿಗೆ ಬಂದಿದೆ. ಈ ಅಧಿನಿಯಮದ ಪ್ರಕರಣ 4(ಸಿ) ರಡಿ ಜಾತಿ ಪ್ರಮಾಣ ಪತ್ರ ಮತ್ತು ಆದಾಯ ಮತ್ತು ಜಾತಿ ಪ್ರಮಾಣ ಪತ್ರದ ಪರಿಶೀಲನೆಗಾಗಿ ಜಿಲ್ಲೆಗೊಂದು ಅಥವಾ ಹೆಚ್ಚು ಪರಿಶೀಲನಾ ಸಮಿತಿಗಳನ್ನು ರಚಿಸತಕ್ಕದ್ದಿದೆ.

ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) (ತಿದ್ದುಪಡಿ) ನಿಯಮಗಳು 1993 ಇದು ದಿನಾಂಕ: 11.11.1993 ರಿಂದ ಜಾರಿಗೆ ಬಂದಿರುತ್ತದೆ. ಸದರಿ ನಿಯಮ 4 ಮತ್ತು 5 ರಂತೆ ಜಾತಿ ಪರಿಶೀಲನಾ ಸಮಿತಿ ಮತ್ತು ಜಾತಿ ಮತ್ತು ಆದಾಯ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿದೆ. ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ

(ನೇಮಕಾತಿ ಮುಂತಾದವುಗಳ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000 ಇವು ದಿನಾಂಕ: 03.06.2000 ದಿಂದ ಜಾರಿಗೆ ಬಂದಿವೆ. ಸದರಿ ನಿಯಮಾವಳಿಯ 4, 5, 6ಎ, ಮತ್ತು 7ನೇ ನಿಯಮಗಳಲ್ಲಿ ಜಾತಿ ಪರಿಶೀಲನಾ ಸಮಿತಿಯು ಹಾಗೂ ಜಾತಿ ಮತ್ತು ಆದಾಯ ಪರಿಶೀಲನಾ ಸಮಿತಿಗಳು ಸಿಂಧುತ್ವ ಪ್ರಮಾಣ ಪತ್ರ ನೀಡಲು ಪಾಲಿಸಬೇಕಾದ ಪ್ರಕಾರ್ಯಗಳನ್ನು ಸದರಿ ನಿಯಮಗಳಲ್ಲಿ ತಿಳಿಸಲಾಗಿದೆ.

ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 36702–18/2000 ಮತ್ತು 38791 ರಿಂದ 38800/2000 ಹಾಗೂ ರಿಟ್ ಮೇಲ್ಮನವಿ 7536/01 c/w 7546–61/01 ರಲ್ಲಿ ಘೋಷಿಸಿದ ಆದೇಶಗಳಲ್ಲಿ ಹೇಳಿದ ಅಂಶಗಳಂತೆ ಮೇಲೆ ನಮೂದಿಸಿದ ಅಧಿನಿಯಮ ಮತ್ತು ನಿಯಮಗಳನ್ನು ಪೂರ್ವಾನ್ವಯವಾಗಿ ಅನ್ವಯಿಸಲು ಬರುವುದಿಲ್ಲ ಮತ್ತು ಸದರಿ ಅಧಿನಿಯಮ ಮತ್ತು ನಿಯಮಾವಳಿಗಳು ಜಾರಿಗೆ ಬರುವ ಪೂರ್ವದಲ್ಲಿ ನೀಡಲಾದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳಿಗೆ ಮೇಲೆ ಉಲ್ಲೇಖಿಸಲಾದ ಅಧಿನಿಯಮ ಮತ್ತು ನಿಯಮಾವಳಿಗಳು ಯಾವುದೇ ಪರಿಣಾಮ ಬೀರುವುದಿಲ್ಲ. ಆದುದರಿಂದ, ಈ ಹಿಂದೆ ನೀಡಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ಸತ್ಯಶೀಲತೆ ಬಗ್ಗೆ ಜಾತಿ ಪ್ರಮಾಣ ಪತ್ರವನ್ನು ನೀಡಿದ ಪ್ರಾಧಿಕಾರವೇ ಪರಿಶೀಲಿಸಿ ಸೂಕ್ತ ಕ್ರಮ ತೆಗೆದುಕೊಳ್ಳತಕ್ಕದ್ದಿದೆ.

ಮೇಲೆ ತಿಳಿಸಿದ ನಿಯಮಾವಳಿಯ 3ನೇ ನಿಯಮದಡಿ ಈ ಹಿಂದೆ ನೀಡಲಾದ ಜಾತಿ ಪ್ರಮಾಣ ಪತ್ರಗಳ ಸತ್ಯಶೀಲತೆಯನ್ನು ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳು ಅಂದರೆ ತಹಶೀಲ್ದಾರರು ತಾವು ನೀಡಿದ ಜಾತಿ ಪ್ರಮಾಣ ಪತ್ರಗಳ ಕುರಿತು ದೂರುಗಳು ಅಥವಾ ಜಾತಿ ಪ್ರಮಾಣ ಪತ್ರ ನೀಡಿದ್ದು ಸಂಶಯಾಸ್ಪದವೆಂದು ಕಂಡುಬಂದರೆ ಸ್ವಯಂಪ್ರೇರಿತವಾಗಿ ಈ ಹಿಂದೆ ನೀಡಿದ ಜಾತಿ ಪ್ರಮಾಣ ಪತ್ರಗಳನ್ನು ಮೇಲ್ಕಂಡ ನಿಯಮಗಳ ಅಡಿಯಲ್ಲಿ ಪುನರ್ ತನಿಖೆ/ವಿಚಾರಣೆಯನ್ನು ಸಂಬಂಧಪಟ್ಟವರಿಗೆ ಸೂಚನೆ ನೀಡಿ ಅವರ ಹೇಳಿಕೆಯನ್ನು ಪಡೆದು ಅಂತಿಮ ನಿರ್ಧಾರವನ್ನು ಕೈಗೊಂಡು ಸಂದರ್ಭಾನುಸಾರ ಜಾತಿ ಪ್ರಮಾಣ ಪತ್ರ ಅಥವಾ ಆದಾಯ ಮತ್ತು ಜಾತಿ ಪ್ರಮಾಣ ಪತ್ರವನ್ನು ದೃಢೀಕರಿಸತಕ್ಕದ್ದು ಅಥವಾ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸತಕ್ಕದ್ದು. ಈ ಸೂಚನೆಗಳನ್ನು ಸಕ್ಷಮ ಪ್ರಾಧಿಕಾರಿಗಳು ಗಮನದಲ್ಲಿರಿಸಿ ಕ್ರಮ ಕೈಗೊಳ್ಳತಕ್ಕದ್ದು.

**ಎ.ಎಂ. ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಪಿ.ಆರ್. 1282 ಸಮಾಜ ಕಲ್ಯಾಣ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ನಅಇ 40 ನಯೋಸೇ 2007, ಬೆಂಗಳೂರು, ದಿನಾಂಕ: 5ನೇ ಜುಲೈ 2007**

ಸರ್ಕಾರದ ಆದೇಶ ಸಂಖ್ಯೆ: ನಅಇ 40 ನಯೋಸೇ 2007, ದಿನಾಂಕ: 10.05.2007ರ ಪ್ರಸ್ತಾವನೆಯ ಪ್ಯಾರದಲ್ಲಿನ ಏಳನೇ ಸಾಲಿನಲ್ಲಿ "24–02–2007" ಎಂದು ನಮೂದಿಸಿರುವುದನ್ನು "ದಿನಾಂಕ: 09.02.2007" ಎಂದು ಮತ್ತು ಸದರಿ ಸರ್ಕಾರಿ ಆದೇಶದ ಪ್ಯಾರಾದಲ್ಲಿನ ಮೂರನೇ ಸಾಲಿನಲ್ಲಿ "24–02–2007" ಎಂದು ನಮೂದಿಸಿರುವುದನ್ನು "09.02.2007" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಪಿ.ಆರ್. 1283 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಕಂದಾಯ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಕಂಇ 44 ಎಂಎಸ್‌ಟಿ 2007, ಬೆಂಗಳೂರು, ದಿನಾಂಕ: 3ನೇ ಜುಲೈ 2007**

ಸರ್ಕಾರಿ ಆದೇಶ ಸಂಖ್ಯೆ: ಕಂಇ 44 ಎಂಎಸ್‌ಟಿ 2007, ದಿನಾಂಕ: 08.05.2007ರ ಆದೇಶ ಭಾಗದ ಪ್ಯಾರ 3ರ ಪಟ್ಟಿಯಲ್ಲಿ ರಾಜ್ಯ ಮಟ್ಟದ ಹುದ್ದೆಗಳನ್ನು ಸೃಜನೆಯ ಬಗ್ಗೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಮೊದಲಿದ್ದ ಹುದ್ದೆಯ ಸಂಖ್ಯೆ | ತಿದ್ದಿದ ಹುದ್ದೆಯ ಸಂಖ್ಯೆ |
|---|---|---|---|
| 1 | ವಾಹನ ಚಾಲಕ | 01 | 02 |
| 2 | ಗ್ರೂಪ್ ಡಿ | 03 | 02 |

ಮುಂದುವರೆದು, ಆದೇಶದ ಪ್ಯಾರಾ 5 ರಲ್ಲಿ ನಿರ್ದೇಶಕರಿಗೆ ರೂ.4,75,00/– ಗಳ ವೆಚ್ಚದಲ್ಲಿ ವಾಹನ ಒಂದನ್ನು ಎಂಬುದರ ಬದಲಾಗಿ ನಿರ್ದೇಶಕರಿಗೆ ಮತ್ತು ಶಾಖಾಧಿಕಾರಿಗಳಿಗೆ ರೂ.7,46,100/– ಗಳ ವೆಚ್ಚದಲ್ಲಿ 2 ವಾಹನಗಳನ್ನು ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು. ಇತರ ಯಾವುದೇ ಬದಲಾವಣೆಗಳು ಇಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ವಿ. ಜಗನ್ನಾಥ ಗುಪ್ತ**
ಪಿ.ಆರ್. 1284 ಸರ್ಕಾರದ ಉಪ ಕಾರ್ಯದರ್ಶಿ,
(ಭೂ ಸುಧಾರಣೆ) ಕಂದಾಯ ಇಲಾಖೆ.

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ವಿಷಯ:** ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಲ್ಲಿನ ಮಾನ್ಯತೆ ಪಡೆದ ಪ್ರೌಢ ಶಾಲೆಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ರಾಜ್ಯ ಸರ್ಕಾರಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸು ನೆರವು ಯೋಜನೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 6 ಸಂವ್ಯವಿ 97, ದಿನಾಂಕ: 09.10.2002.
2) ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 150 ಆಡಳಿತ 2002, ದಿನಾಂಕ: 11.11.2002.
3) ಕೇಂದ್ರ ಸರ್ಕಾರದ ಸಂಸದೀಯ ವ್ಯವಹಾರಗಳ ಸಚಿವಾಲಯದ ಪತ್ರ ಸಂಖ್ಯೆ: ಎಫ್.2(2).2005–ಆರ್ ಅಂಡ್ ಸಿ, ದಿನಾಂಕ: 07.02.2006.
4) ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 11 ಸಂವ್ಯವಿ 2006, ದಿನಾಂಕ: 19.5.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ ನಿಯಮಗಳು, 1999ನ್ನು ಹೊರಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ (ತಿದ್ದುಪಡಿ) ನಿಯಮಗಳು, 2002ನ್ನು ಹೊರಡಿಸಲಾಗಿದೆ.

ಮೇಲೆ (3) ರಲ್ಲಿ ಓದಲಾಗಿರುವ ಕೇಂದ್ರ ಸರ್ಕಾರದ ಪತ್ರದಲ್ಲಿ 2005ರ ಫೆಬ್ರವರಿ 4–5ನೇ ದಿನಾಂಕಗಳಂದು ಹೈದರಾಬಾದ್‌ನಲ್ಲಿ ನಡೆದ 13ನೇ ಅಖಿಲ ಭಾರತ ಸಚೇತಕರ ಸಮ್ಮೇಳನವು, ಸಂಸದೀಯ ವ್ಯವಹಾರಗಳ ಮಂತ್ರಾಲಯವು ಪ್ರಸ್ತುತ ಒದಗಿಸುತ್ತಿರುವ ಹಣಕಾಸು ನೆರವಿನ ಪ್ರಮಾಣವನ್ನು ಒಂದು ಲಕ್ಷ ರೂಪಾಯಿಗಳಿಂದ ಮೂರು ಲಕ್ಷ ರೂಪಾಯಿಗಳಿಗೆ ಹೆಚ್ಚಿಸತಕ್ಕದ್ದೆಂದು ಇತರೆ ವಿಷಯಗಳ ಜೊತೆಯಲ್ಲಿ ಶಿಫಾರಸ್ಸು ಮಾಡಿದೆ. ಸದರಿ ಶಿಫಾರಸ್ಸನ್ನು ಭಾರತ ಸರ್ಕಾರವು ಪರಿಶೀಲಿಸಿ 2005–06ರ ಶೈಕ್ಷಣಿಕ ವರ್ಷದಿಂದ ಹಣಕಾಸು ನೆರವನ್ನು ವಾರ್ಷಿಕ ಎರಡು ಲಕ್ಷ ರೂಪಾಯಿಗಳಿಗೆ ಹೆಚ್ಚಿಸಲು ತೀರ್ಮಾನಿಸಿದೆ ಮತ್ತು ಹಣಕಾಸು ನೆರವಿನ ಯೋಜನೆಯ ಒಂದು ಪ್ರತಿಯನ್ನು ಲಗತ್ತಿಸಿ ಕಳುಹಿಸಿ ಕೊಟ್ಟಿರುತ್ತದೆ. ಪ್ರಸ್ತುತ ಜಾರಿಯಲ್ಲಿರುವ ನಿಯಮಗಳು ಕೇಂದ್ರ ಸರ್ಕಾರವು ಒದಗಿಸಿರುವ ಹಣಕಾಸು ಯೋಜನೆಯ ಮಾರ್ಗಸೂಚಿಗಳಿಗೆ ವ್ಯತಿರಿಕ್ತವಾಗಿರುವುದರಿಂದ ಜಾರಿಯಲ್ಲಿರುವ ನಿಯಮಗಳನ್ನು ನಿರಸನಗೊಳಿಸಿ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸಲು ನಿರ್ಧರಿಸಲಾಗಿದೆ.

ಮೇಲೆ (4) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ ನಿಯಮಗಳು, 1999ನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿರಸನಗೊಳಿಸಲಾಗಿದೆ. ಹಾಗೂ ಸಂಸದೀಯ ವ್ಯವಹಾರಗಳ ಮಂತ್ರಾಲಯ, ಭಾರತ ಸರ್ಕಾರ ಇವರ ಪತ್ರ ಸಂಖ್ಯೆ: ಎಫ್2(2)2005–ಆರ್‌ಸಿ, ದಿನಾಂಕ: 7.2.2006 ಹಾಗೂ ಇದರೊಂದಿಗೆ ಲಗತ್ತಿಸಿರುವ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸುವುದಕ್ಕಾಗಿ ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸಿನ ಯೋಜನೆ 2006ನ್ನು (ಅನುಬಂಧದಲ್ಲಿ ಲಗತ್ತಿಸಿ) ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯದಲ್ಲಿ ಜಾರಿಗೊಳಿಸಲು ಆದೇಶಿಸಿದೆ.

ರಾಜ್ಯಮಟ್ಟದ ಯುವ ಸಂಸತ್ ಸ್ಪರ್ಧೆಯನ್ನು ಜಾರಿಗೊಳಿಸಬೇಕಾದಲ್ಲಿ ಜಿಲ್ಲಾ ಮಟ್ಟದ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸಿ ಪ್ರೌಢ ಶಾಲಾ ವಿದ್ಯಾರ್ಥಿಗಳಿಗೆ ಜಿಲ್ಲಾ ಮಟ್ಟದಲ್ಲಿ ವಿಷಯಾಭಿಮುಖ ಶಿಕ್ಷಣ ನೀಡುವುದು ಹಾಗೂ ಸೂಕ್ತ ಪ್ರಕ್ರಿಯೆಯ ಮುಖಾಂತರ ಅರ್ಹ ಅಭ್ಯರ್ಥಿಗಳನ್ನು ರಾಜ್ಯಮಟ್ಟದ ಸ್ಪರ್ಧೆಗಳಿಗೆ ಆಯ್ಕೆ ಮಾಡುವುದು ಅಗತ್ಯವೆಂದು ತೀರ್ಮಾನಿಸಲಾಯಿತು. ಆದ್ದರಿಂದ ಮೇಲೆ (4) ರಲ್ಲಿ ಓದಲಾದ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸುವುದಕ್ಕಾಗಿ ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸಿನ ಯೋಜನೆ 2006ನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದನ್ವಯ ಮಾರ್ಪಡಿಸಿ ಹೊರಡಿಸಲು ಉದ್ದೇಶಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 31 ಸಂವ್ಯವಿ 2007, ಬೆಂಗಳೂರು, ದಿನಾಂಕ: 27ನೇ ಜೂನ್ 2007**

ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 11 ಸಂವ್ಯವಿ 2006, ದಿನಾಂಕ: 19.5.2006 ರಲ್ಲಿ ಜಾರಿಗೊಳಿಸಿರುವ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸುವುದಕ್ಕಾಗಿ ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸಿನ ಯೋಜನೆ 2006ನ್ನು ಅನುಬಂಧದಲ್ಲಿ ಲಗತ್ತಿಸಿರುವಂತೆ ಮಾರ್ಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯದಲ್ಲಿ ಜಾರಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ಶ್ಯಾಮಲ**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 31 ಸಂವ್ಯವಿ 2007, ಬೆಂಗಳೂರು, ದಿನಾಂಕ: 27.06.2007ರ ಅನುಬಂಧ**

ಪ್ರೌಢ ಶಾಲಾ ವಿದ್ಯಾರ್ಥಿಗಳಿಗೆ ನಡೆಸಲಾಗುತ್ತಿರುವ ರಾಜ್ಯ ಮಟ್ಟದ ಯುವ ಸಂಸತ್ ಸ್ಪರ್ಧೆಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲು ಹಾಗೂ ವಿಷಯಾಭಿಮುಖ ಶಿಕ್ಷಣವನ್ನು ಅವರಿಗೆ ನೀಡಲು ಜಿಲ್ಲಾ ಮಟ್ಟದಲ್ಲಿ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸಲು ಈ ಕೆಳಗೆ ನಮೂದಿಸಿರುವಂತೆ ಮಾರ್ಗಸೂಚಿಗಳನ್ನು ಜಾರಿಗೊಳಿಸಲಾಗಿದೆ.

1. **ಜಿಲ್ಲಾ ಮಟ್ಟದ ಯುವ ಸಂಸತ್ ಸ್ಪರ್ಧೆ.–** (1) ಪ್ರತಿಯೊಂದು ಶೈಕ್ಷಣಿಕ ವರ್ಷದ ಪ್ರಾರಂಭದದ ಅಂದರೆ ಜುಲೈ ತಿಂಗಳ ಅಂತ್ಯದೊಳಗೆ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕಾರ್ಯದರ್ಶಿಯವರು ಇಲಾಖೆಯ ಸಹಾಯಕ ಪ್ರಾರೂಪಕಾರ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಗಳಿಗೆ ಕಡಿಮೆಯಿಲ್ಲದ ಅಧಿಕಾರಿಗಳನ್ನು ಒಂದು ಅಥವಾ ಒಂದಕ್ಕಿಂತ ಹೆಚ್ಚಿನ ಶೈಕ್ಷಣಿಕ ಜಿಲ್ಲೆಗಳಿಗೆ ತೀರ್ಪುಗಾರರ ಸಮಿತಿಯ ಸದಸ್ಯರಾಗಿ ನೇಮಿಸತಕ್ಕದ್ದು.

(2) ತೀರ್ಪುಗಾರರ ಸಮಿತಿಯ ಸದಸ್ಯರಾಗಿ ನೇಮಕಗೊಂಡ ಅಧಿಕಾರಿಗಳು ಸಂಬಂಧಪಟ್ಟ ಶೈಕ್ಷಣಿಕ ಜಿಲ್ಲೆಯ ಉಪ ನಿರ್ದೇಶಕರನ್ನು ಸಂಪರ್ಕಿಸಿ ಜಿಲ್ಲೆಯಲ್ಲಿ ನಡೆಸುವ ಜಿಲ್ಲಾ ಮಟ್ಟದ ಯುವ ಸಂಸತ್ ಸ್ಪರ್ಧೆಗೆ ಅಗತ್ಯವಿರುವ ಮಾಹಿತಿಗಳನ್ನು ಅಂದರೆ ಕಿರುಹೊತ್ತಿಗೆ/ಸಿ.ಡಿ. ಇತ್ಯಾದಿಗಳನ್ನು ಒದಗಿಸಲು ಹಾಗೂ ಜಿಲ್ಲಾ ಮಟ್ಟದಲ್ಲಿ ನವೆಂಬರ್ ತಿಂಗಳೊಳಗೆ ಸ್ಪರ್ಧೆಯನ್ನು ನಡೆಸಲು ಕ್ರಮ ಜರುಗಿಸತಕ್ಕದ್ದು.

(3) ಜಿಲ್ಲಾ ಮಟ್ಟದ ಯುವ ಸಂಸತ್ ಸ್ಪರ್ಧೆಯಲ್ಲಿ ಭಾಗವಹಿಸಿರುವ ಶಾಲೆಗಳ ಹಾಗೂ ವಿದ್ಯಾರ್ಥಿಗಳ ಪಟ್ಟಿಯನ್ನು ಅವರಿಗೆ ನೀಡಿರುವ ಅಂಕಗಳನ್ನು ನಮೂದಿಸಿ ಸದರಿ ಪಟ್ಟಿಯನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕಾರ್ಯದರ್ಶಿಯವರಿಗೆ ಡಿಸೆಂಬರ್ ಮೊದಲನೇ ವಾರದಲ್ಲಿ ನೀಡತಕ್ಕದ್ದು.

2. **ರಾಜ್ಯ ಮಟ್ಟದ ಯುವ ಸಂಸತ್ ಸ್ಪರ್ಧೆ.–** ಪ್ರತಿಯೊಂದು ಜಿಲ್ಲೆಗೆ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ವತಿಯಿಂದ ನೇಮಕಗೊಂಡಿರುವ ತೀರ್ಪುಗಾರರ ಸಮಿತಿಯ ಸದಸ್ಯರು ತಮ್ಮ ಜಿಲ್ಲೆಯಿಂದ ಆಯ್ಕೆಯಾದ ವಿದ್ಯಾರ್ಥಿಗಳಿಗೆ ರಾಜ್ಯ ಮಟ್ಟದ ಯುವ ಸಂಸತ್ ಸ್ಪರ್ಧೆ ನಡೆಯುವ ಪೂರ್ವದಲ್ಲಿ ಸೂಕ್ತ ಸಮಯದಲ್ಲಿ ಆಹ್ವಾನ ಪತ್ರಿಕೆ ಲಭ್ಯವಾಗುವಂತೆ ಕ್ರಮ ಜರುಗಿಸುವುದು ಹಾಗೂ ರಾಜ್ಯ ಮಟ್ಟದ ಯುವ ಸಂಸತ್ ಸ್ಪರ್ಧೆಯಲ್ಲಿ ಸದರಿ ಸ್ಪರ್ಧಿಗಳಿಗೆ ಊಟ, ವಸತಿ ಇತ್ಯಾದಿಗಳಿಗೆ ಕ್ರಮ ಜರುಗಿಸತಕ್ಕದ್ದು.

**ಬಿ.ಜಿ. ಶ್ಯಾಮಲ**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 1285

## COMMERCE & INDUSTRIES SECRETARIAT

**Subject:** Proposal of M/s Grasim Industries Ltd., for expansion of the existing VSF plant from 51,000 TPA capacity to 87,600 TPA & captive power plant from 10 MW to 20 MW at Kumarapatnam village, Ranebennur Taluk, Haveri District.

**Read:** Procedings of the 8th State High Level Clearance Clearance Committee [SHLCC] meeting held on 23.2.2007.

**PREAMBLE:**

M/s Grasim Industries Ltd., for expansion of the existing VSF plant from 51,000 TPA capacity to 87,600 TPA & captive Power Plant from 10 MW to 20 MW at Kumarapatnam Village, Ranebennur Taluk, Haveri District, with an investment of Rs.276.00 crores. The project would provide employment to about 130 persons. The Company had requested approval of the project for sanction of various Infrastructure facilities as well as incentives and concessions.

The State High Level Clearance Committee, [SHLCC] after detailed discussion of the project proposal of the said Company, approved the project proposal of M/s Grasim Industries Ltd., and recommended to grant Infrastructure facilities and to extent incentives & concessions. Hence the following order.

**GOVERNMENT ORDER NO: CI 186 SPI 2007, BANGALORE, DATED: 11th July 2007**

In the circumstances explained above, Government is pleased to approve project M/s Grasim Industries Ltd., for expansion of VSF plant from 51,000 TPA capacity to 87,600 TPA & captive Power Plant from 10 MW to 20 MW, within the existing factory premises at Kumarapatnam Village, Ranebennur Taluk, Haveri District, with an investment of Rs.276.00 crores. and extend the following infrastructure facilities, incentives and concessions.

**INFRASTRUCTURE FACILITIES:**

**Incentivies and Concessions:** As per New Industrial Policy 2006-11.

**Environment:** The promoters were advised to obtain CFE from KSPCB & ECC from MOEF, GOI

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy of Employment to local people. A copy of human resource development plan shall be sent to the Commissioner for I.D. & Director of Industries and Commerce for monitoring.

**Vendor Development:** Where were there is scope for vendor development_for the project, the Company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Commissioner for I.D. & Director of Industries and Commerce for monitoring.

**Others:**

The promoter shall take all statutory and other necessary clearances and shall submit milestones/progress in implementation of the project regularly, which will be monitored buy the Departments concerned.

This approval is valid for a period of two years from the date of issue.

By Order and in the name of the Governor of Karnataka,

**K.R. CHANDRAMMA**

Desk Officer (Technical Cell),

Commerce & Industries Department.

P.R. 1287

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎನ್.ಸಿ. ವಸಂತಕುಮಾರ್, ಉಪನಿರ್ದೇಶಕರು, ಭೂಮಾಪನ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿ ಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 5 ಭೂದಾಸೇ (1) 2006, ದಿನಾಂಕ: 16.5.2007.

**ಪ್ರಸ್ತಾವನೆ:**

ಶ್ರೀ ಎನ್.ಸಿ. ವಸಂತಕುಮಾರ್, ಪ್ರಸ್ತುತ ವಿಚಾರಣಾಧಿಕಾರಿಗಳು, ನಗರಮಾಪನ ತಂಡ–1 ಕೇಂದ್ರ ಕಛೇರಿ, ಭೂಮಾಪನ ಇಲಾಖೆ, ಬೆಂಗಳೂರು ಇಲ್ಲಿ ಹಾಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇವರು ಈ ಹಿಂದೆ ಬಳ್ಳಾರಿ ವಿಭಾಗದಲ್ಲಿ ಭೂದಾಖಲೆಗಳ ಉಪ ನಿರ್ದೇಶಕರಾಗಿದ್ದಾಗ ಅಂದರೆ ದಿನಾಂಕ: 11.07.2000 ರಿಂದ 17.12.2004 ರವರೆಗಿನ ಅವಧಿಯಲ್ಲಿ ಸುಮಾರು 32 ಪ್ರಕರಣಗಳಲ್ಲಿ ಕರ್ತವ್ಯಲೋಪ ಎಸಗಿರುವ ಆರೋಪಗಳಿಗಾಗಿ ಇವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 16.5.2007ರ ಆದೇಶದಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಿದ್ದು ಹಾಗೂ ಈ ಬಗ್ಗೆ ದಾಖಲಾತಿಗಳ ಪ್ರತಿಗಳೊಡನೆ ವಿಚಾರಣಾಧಿಕಾರಿಗಳಿಗೆ ಕಳುಹಿಸಲಾಗಿತ್ತು. "ಶ್ರೀ ಎನ್.ಎಸ್.ಸಂಗೊಳ್ಳಿ ರವರು ಸದರಿ ಪತ್ರದ ಮೇಲೆ ನನ್ನ ವೈಯಕ್ತಿಕ ಕಾರಣಗಳಿಗಾಗಿ ವಿಚಾರಣೆ ನಡೆಸಲು ಆಗುವುದಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ" ಎಂಬ ಷರಾದೊಂದಿಗೆ ಪತ್ರ ಹಾಗೂ ದಾಖಲೆಗಳನ್ನು ಹಿಂತಿರುಗಿಸಿರುತ್ತಾರೆ. ಆದುದರಿಂದ ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 05 ಭೂದಾಸೇ(1) 2006, ಬೆಂಗಳೂರು, ದಿನಾಂಕ: 7ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ, ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005, ದಿನಾಂಕ: 23.08.2005 ರಂತೆ ರೂ.6000/– ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 04.03.2002 ರಂತೆ ರೂ.1000/– ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜಂಟಿ ನಿರ್ದೇಶಕರು, ವಿಚಾರಣೆ, ತನಿಖೆ, ಭೂಮಾಪನ ಇಲಾಖೆ, ಬೆಂಗಳೂರು

ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಆಯುಕ್ತರು, ಭೂಮಾಪನ ಇಲಾಖೆ, ಬೆಂಗಳೂರು ಇವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಆರ್. ಚಿನ್ನಸ್ವಾಮಿ**

ಪಿ.ಆರ್. 1289 ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಕಂದಾಯ ಇಲಾಖೆ (ಭೂಮಾಪನ).

**ಶಿಕ್ಷಣ ಸಚಿವಾಲಯ**

**ವಿಷಯ:** ಮಂಡ್ಯದ ಕೃಷಿಕ್ ಸರ್ವೋದಯ ಫೌಂಡೇಷನ್ ಟ್ರಸ್ಟ್ ಕೈಗೊಂಡಿರುವ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು, ಕೃಷಿಕ್ ಸರ್ವೋದಯ ಫೌಂಡೇಷನ್ ಟ್ರಸ್ಟ್ (ರಿ), ಪಿ.ಇ.ಎಸ್. ವಿಜ್ಞಾನ ಕಾಲೇಜು ಆವರಣ, ಎಂ.ಸಿ.ರಸ್ತೆ, ಮಂಡ್ಯ, ಇವರು ದಿನಾಂಕ: 23.01.2007 ರಂದು ಮಾನ್ಯ ಮುಖ್ಯ ಮಂತ್ರಿಯವರಿಗೆ ಸಲ್ಲಿಸಿರುವ ಮನವಿ.

**ಪ್ರಸ್ತಾವನೆ:**

ಮಂಡ್ಯದ ಕೃಷಿಕ್ ಸರ್ವೋದಯ ಫೌಂಡೇಷನ್ ಟ್ರಸ್ಟ್ (ರಿ), ಮಂಡ್ಯ ನಗರದಲ್ಲಿ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿಗಾಗಿ ಕಟ್ಟುತ್ತಿರುವ ಸುಸಜ್ಜಿತ ಸ್ಪರ್ಧಾಸೌಧ, ಮಾಹಿತಿ ಕೇಂದ್ರ, ಗ್ರಂಥಾಲಯ ಮತ್ತು ವಸತಿ ನಿಲಯ ಕಟ್ಟಡಗಳಿಗೆ ಕನಿಷ್ಟ 50.00 ಲಕ್ಷ ರೂ.ಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಅದರ ಅಧ್ಯಕ್ಷರು, ದಿನಾಂಕ: 23.01.2007 ರಂದು ಮಾನ್ಯ ಮುಖ್ಯ ಮಂತ್ರಿಯವರಿಗೆ ಸಲ್ಲಿಸಿರುವ ಮನವಿಯಲ್ಲಿ ಕೋರಿರುತ್ತಾರೆ. ಅವರ ಮನವಿಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 138 ಯೋಯೋಕ 2007, ಬೆಂಗಳೂರು, ದಿನಾಂಕ: 3ನೇ ಜುಲೈ 2007**
**[ಇಡಿ 104 ಸ್ವೀಮರ (ಯುನಿಕ್) 2007, ದಿನಾಂಕ: 03.7.2007]**

ಮಂಡ್ಯದ ಕೃಷಿಕ್ ಸರ್ವೋದಯ ಫೌಂಡೇಷನ್ ಟ್ರಸ್ಟ್ (ರಿ), ಮಂಡ್ಯ ಇವರು ಮಂಡ್ಯ ನಗರದಲ್ಲಿ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿಗಾಗಿ ಕಟ್ಟುತ್ತಿರುವ ಸುಸಜ್ಜಿತ ಸ್ಪರ್ಧಾ ಸೌಧ, ಮಾಹಿತಿ ಕೇಂದ್ರ, ಗ್ರಂಥಾಲಯ ಮತ್ತು ವಸತಿ ನಿಲಯ ಕಟ್ಟಡಗಳ ನಿರ್ಮಾಣಕ್ಕಾಗಿ 50.00 ಲಕ್ಷ ರೂ.ಗಳನ್ನು [ಐವತ್ತು ಲಕ್ಷ ರೂ.ಗಳು ಮಾತ್ರ] ಹಾಗೂ ಪಿ.ಇ.ಎಸ್. ಇಂಜಿನಿಯರಿಂಗ್ ಕಾಲೇಜು ಮಂಡ್ಯ ಇದರ ಪ್ಲೇಸ್‌ಮೆಂಟ್ ಕಟ್ಟಡ ನಿರ್ಮಾಣಕ್ಕಾಗಿ 25.00 ಲಕ್ಷ ರೂ.ಗಳನ್ನು [ಇಪ್ಪತ್ತೈದು ಲಕ್ಷ ರೂ.ಗಳು ಮಾತ್ರ] ಲೆಕ್ಕ ಶೀರ್ಷಿಕೆ: "2203–00–104–0–01–101" "ಸರ್ಕಾರೇತರ ತಾಂತ್ರಿಕ ಶಾಲೆಗಳು ಸಹಾಯಾನುದಾನ" (ಯೋಜನೇತರ) ಅಡಿ ಒದಗಿಸಿರುವ ಅನುದಾನದಲ್ಲಿ ವಿಶೇಷ ಪ್ರಕರಣವೆಂದು ಪರಿಗಣಿಸಿ ಒಂದು ಬಾರಿಗೆ ಮಾತ್ರ ಬಿಡುಗಡೆ ಮಾಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ದಿನಾಂಕ: 27.06.2007, ಸಂಖ್ಯೆ: ಆಇ:363:ವೆಚ್ಚ–8:2007ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1297 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ).

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀಮತಿ ಹೆಲನ್ ಆಂತೋನಿ, ಅಧೀಕ್ಷಕರು, ಅಮೂಲ್ಯ ಶಿಶು ಗೃಹ, ಗುಲ್ಬರ್ಗಾ, ಇವರನ್ನು ಅಮಾನತ್ತಿನಲ್ಲಿಡುವ ಕುರಿತು.

**ಓದಲಾಗಿದೆ:** 1) ಅಡಾಪ್ಷನ್ ಕೋ ಆರ್ಡಿನೇಷನ್ ಏಜೆನ್ಸಿ, ಕರ್ನಾಟಕ ಇವರ ದೂರು ದಿನಾಂಕ: 13.4.2007.

2) ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಬಳ್ಳಾರಿ ಇವರ ಅ.ಸ.ಪತ್ರ ಸಂಖ್ಯೆ: ಉನಿಗು/ಮಮಅಇ/ಸಿಬ್ಬಂದಿ/ದೂರು/2007–08, ದಿನಾಂಕ: 2.6.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 13.4.2007ರ ಪತ್ರದಲ್ಲಿ ಅಡಾಪ್ಷನ್ ಕೋ ಆರ್ಡಿನೇಷನ್ ಏಜೆನ್ಸಿ, ಬೆಂಗಳೂರು, ಕರ್ನಾಟಕ, ಇವರು ಶ್ರೀಮತಿ ಹೆಲನ್ ಆಂತೋನಿ ಅಧೀಕ್ಷಕರು, ಅಮೂಲ್ಯ ಶಿಶು ಗೃಹ ಗುಲ್ಬರ್ಗಾ, ಇವರ ವಿರುದ್ಧ ಸರ್ಕಾರಕ್ಕೆ ದೂರು ಸಲ್ಲಿಸಿ ಶ್ರೀಮತಿಯವರು ಮಕ್ಕಳನ್ನು ದತ್ತು ಪಡೆಯುವ ಪೋಷಕರಿಂದ ಹಣ ಪಡೆದಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 2.6.2007 ರಲ್ಲಿ ಶ್ರೀ ಎಂ. ರಾಧಾಕೃಷ್ಣ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಗುಲ್ಬರ್ಗಾ, ಇವರು ಈ ಕುರಿತು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿರುವ ಮೇರೆಗೆ ಸದರಿ ಅವಧಿಯಲ್ಲಿ ಶ್ರೀಮತಿ ಹೆಲನ್ ಆಂತೋನಿ, ಅಧೀಕ್ಷಕರು, ಅಮೂಲ್ಯ ಶಿಶು ಗೃಹ, ಗುಲ್ಬರ್ಗಾ, ಇವರು ಮಕ್ಕಳನ್ನು ದತ್ತು ನೀಡುವ ಪ್ರಕ್ರಿಯೆಗಾಗಿ ಸೆಂಟ್ರಲ್ ಅಡಾಪ್ಷನ್ ಆಫ್ ರಿಸೋರ್ಸಸ್ ಏಜೆನ್ಸಿ ನವದೆಹಲಿ, ಇವರ ಮಾರ್ಗಸೂಚಿಯಂತೆ ಪ್ರತಿ ಮಗುವಿಗೆ ನ್ಯಾಯಾಲಯ ನೋಂದಣಿ ಶುಲ್ಕ ಹಾಗೂ ಇತರೆ ವೆಚ್ಚಕ್ಕಾಗಿ ರೂ.1500/– ರಂತೆ ವೆಚ್ಚ ಭರಿಸಲು ಅವಕಾಶ ಕಲ್ಪಿಸಲಾಗಿದ್ದು, ಅದರಂತೆಯೇ ಅನುದಾನ ಲಭ್ಯವಿದ್ದರೂ ಸಹ, ಇದಕ್ಕೆ ತಗಲುವ ವೆಚ್ಚವನ್ನು ಸದರಿ ಅನುದಾನದಲ್ಲಿ ಭರಿಸದೇ ಇದರ ಬದಲಾಗಿ ದತ್ತು ಪಡೆಯುವ ಪೋಷಕರಿಂದಲೇ ಹೆಚ್ಚು ಮೊತ್ತದ ಹಣವನ್ನು ನ್ಯಾಯಾಲಯ ನೋಂದಣಿ ಶುಲ್ಕ ಹಾಗೂ ಇನ್ನಿತರ ವೆಚ್ಚಕ್ಕಾಗಿ ಪಡೆದಿರುವುದು ನಿಜವೆಂದು ಅವರ ವಿಚಾರಣೆಯಲ್ಲಿ ಶ್ರೀಮತಿ ಒಪ್ಪಿಕೊಂಡಿರುತ್ತಾರೆ. ಶ್ರೀಮತಿ ಹೆಲನ್ ಆಂತೋನಿ, ಅಧೀಕ್ಷಕರು, ಅಮೂಲ್ಯ ಶಿಶು ಗೃಹ, ಗುಲ್ಬರ್ಗಾ, ಇವರು ಮಕ್ಕಳನ್ನು ದತ್ತು ನೀಡುವ ಸಂಬಂಧದಲ್ಲಿ ಬೆಂಗಳೂರು ನಿವಾಸಿಗಳಾದ ಶ್ರೀ ಬಿ.ಎಸ್. ಮುರಳೀಧರನ್, ಶ್ರೀ ಭಾಸ್ಕರನ್ ರಂಗರಾಜನ್ ಮತ್ತು ಶ್ರೀ ಎಂ.ಕೆ.ನಟರಾಜನ್, ಇವರುಗಳಿಂದ ಹೆಚ್ಚಿಗೆ ಹಣ ಪಡೆದಿರುವುದು ಮೇಲ್ನೋಟಕ್ಕೆ ಕಂಡು ಬಂದಿದೆ. ಇದು ಕರ್ನಾಟಕ ನಾಗರಿಕ ಸೇವೆ (ನಡತೆ) ನಿಯಮಾವಳಿಯ ನಿಯಮ 3ರ ಅನ್ವಯ ದುರ್ನಡತೆ ಆಗಿರುವುದರಿಂದ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದನ್ನು ಬಾಕಿ ಇಟ್ಟು ಸದರಿ ಅಧಿಕಾರಿಯನ್ನು ಕೂಡಲೇ ಸೇವೆಯಿಂದ ಅಮಾನತ್ತಿನಲ್ಲಿಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 257 ಎಸ್‌ಜೆಡಿ 2007, ಬೆಂಗಳೂರು, ದಿನಾಂಕ: 4ನೇ ಜುಲೈ 2007**

ಶ್ರೀಮತಿ ಹೆಲನ್ ಆಂತೋನಿ, ಅಧೀಕ್ಷಕರು, ಅಮೂಲ್ಯ ಶಿಶು ಗೃಹ, ಗುಲ್ಬರ್ಗಾ, ಇವರನ್ನು ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 10(1)(ಎ) ಮೇರೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1957ರ ನಿಯಮ 98(1) ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಪಿ.ಆರ್. 1298

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಡಾ: ಟಿ. ಅನ್ನಪೂರ್ಣ, ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಬೆಂಗಳೂರು, ಇವರನ್ನು ಅಮಾನತ್ತಿನಲ್ಲಿ ಇರಿಸುವ ಕುರಿತು.

**ಓದಲಾಗಿದೆ:** 1) ಶ್ರೀ ರಾಜಶೇಖರ್ ರೆಡ್ಡಿ, ನಂ.2082, 11ನೇ ಕ್ರಾಸ್, 2ನೇ ಮೈನ್, ವಸಂತನಗರ, ಬೆಂಗಳೂರು ಇವರು ದಿನಾಂಕ: 10.5.2007 ರಂದು ಕಾರ್ಯದರ್ಶಿ, ಮಮಅಇ ಹಾಗೂ ಅಧ್ಯಕ್ಷರು ಬಾಲಭವನ ಬೆಂಗಳೂರು ಇವರಿಗೆ ದೂರು ನೀಡಿರುವ ಕುರಿತು.

2) ಸರ್ಕಾರದ ನೋಟೀಸ್ ಸಂಖ್ಯೆ: ಮಮಇ 17 ರಾಮಅ 2007, ದಿನಾಂಕ: 1.6.2007ರ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 10.05.2007 ಪತ್ರದಲ್ಲಿ ಶ್ರೀ ರಾಜಶೇಖರ್ ರೆಡ್ಡಿ, ಬೆಂಗಳೂರು, ಇವರು ಸರ್ಕಾರದ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹಾಗೂ ಅಧ್ಯಕ್ಷರು, ಬಾಲಭವನ, ಬೆಂಗಳೂರು, ಇವರಿಗೆ ಡಾ: ಅನ್ನಪೂರ್ಣ, ಆಡಳಿತಾಧಿಕಾರಿ, ಜವಾಹರ ಬಾಲಭವನ, ಬೆಂಗಳೂರು ಇವರ ಕಾರ್ಯವೈಖರಿಯ ವಿರುದ್ಧ ದೂರು ನೀಡಿ ಸದರಿಯವರು ಸಾರ್ವಜನಿಕರೊಂದಿಗೆ ಸರಿಯಾಗಿ ವರ್ತಿಸುತ್ತಿಲ್ಲವೆಂದು ಹಾಗೂ ಬಾಲಭವನದ ವಾಹನವನ್ನು ದುರುಪಯೋಗ ಪಡಿಸುತ್ತಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 1.6.2007 ರಂದು ಈ ಬಗ್ಗೆ ಡಾ: ಅನ್ನಪೂರ್ಣರವರಿಗೆ ನೋಟೀಸ್ ನೀಡಿದ್ದು, ಹಾಗೂ ಶ್ರೀ ರಾಜಶೇಖರ್ ರೆಡ್ಡಿರವರಿಗೆ ಆರ್.ಪಿ.ಎ.ಡಿ. ಮತ್ತು ಸ್ಪೀಡ್ ಪೋಸ್ಟ್‌ನಲ್ಲಿ ಕಳುಹಿಸಲಾಗಿದ್ದು, ಈ ಎರಡು ಪತ್ರಗಳು ಅವರ ವಿಳಾಸದಲ್ಲಿ ಇಲ್ಲವೆಂದು ವಾಪಸ್ಸು ಬಂದಿರುತ್ತದೆ. ಡಾ: ಟಿ. ಅನ್ನಪೂರ್ಣರವರು ದಿನಾಂಕ: 1.6.2007ರ ನೋಟೀಸಿಗೆ ವಿವರಣೆಯನ್ನು ನೀಡುತ್ತ ದಿನಾಂಕ: 10.5.2007 ರಂದು ಕಾರ್ಯದರ್ಶಿ, ಬಾಲಭವನ ಇವರು ಕೋಲ್ಸ್ ಪಾರ್ಕ್ ಮತ್ತು ಜೀವನಭೀಮನಗರ ಬೇಸಿಗೆ ಶಿಬಿರಕ್ಕೆ ಭೇಟಿ ನೀಡಿದ್ದು, ಸದರಿ ದೂರು ಸುಳ್ಳು, ಆರೋಪವಾಗಿದೆಯೆಂದು ತಿಳಿಸಿದ್ದು, ಇದಲ್ಲದೆ ಬಾಲಭವನ ವಾಹನವನ್ನು ಕಛೇರಿ ಕೆಲಸಕ್ಕೆ ಮಾತ್ರ ಉಪಯೋಗಿಸುತ್ತಿರುವುದಾಗಿ ವಿವರಣೆಯನ್ನು ನೀಡಿರುತ್ತಾರೆ. ಬಾಲಭವನ ಕಡತದಿಂದ ದಿನಾಂಕ: 1.2.2007 ರಿಂದ 31.4.2007ರ ವರೆಗೆ 3 ತಿಂಗಳ ಟ್ರಿಪ್‌ಶೀಟ್‌ಗಳನ್ನು ಪಡೆದು ಸದರಿ ಟ್ರಿಪ್‌ಶೀಟ್‌ಗಳನ್ನು ಪರಿಶೀಲಿಸಿದಾಗ ಕೆಲವು ದಿನಾಂಕಗಳನ್ನು ಹೊರತು ಪಡಿಸಿ ಸದರಿ ವಾಹನವನ್ನು ಡಾ: ಟಿ. ಅನ್ನಪೂರ್ಣರವರೆ ವೈಯಕ್ತಿಕವಾಗಿ ತಮ್ಮ ನಿವಾಸದಿಂದ ಬಾಲಭವನಕ್ಕೆ ಹಾಗೂ ಬಾಲಭವನದಿಂದ ನಿವಾಸಕ್ಕೆ ತೆರಳಲು ಉಪಯೋಗಿಸುತ್ತಿರುವುದಾಗಿ ತಿಳಿದು ಬಂದಿರುತ್ತದೆ. ಇದರಿಂದ ಬಾಲಭವನದ ವಾಹನವು ಸದುಪಯೋಗವಾಗದೆ ಇರುವುದು ತಿಳಿದು ಬರುತ್ತದೆ.

ಆಡಳಿತಾಧಿಕಾರಿಯವರು ತಮ್ಮ ವಿವರಣೆಯಲ್ಲಿ ದಿನಾಂಕ: 10.5.2007 ರಂದು ಕಾರ್ಯದರ್ಶಿಗಳು, ಬಾಲಭವನ, ಇವರೊಡನೆ ಸ್ಥಳ ಭೇಟಿ ಮಾಡಲು ಹೋಗಿದ್ದುದಾಗಿ ಸುಳ್ಳು ವರದಿ ಮಾಡಿರುವುದು ಹಾಗೂ ವಾಹನವನ್ನು ಇವರ ಸ್ವಂತ ಕೆಲಸಕಾರ್ಯಗಳಿಗೆ ಉಪಯೋಗಿಸುತ್ತಿರುವುದು ಕಂಡು ಬರುತ್ತದೆ. ಇದು ಕರ್ನಾಟಕ ನಾಗರಿಕ ಸೇವೆ (ನಡತೆ) ನಿಯಮಾವಳಿಗಳು 1966ರ ನಿಯಮ 3ರ ಅನ್ವಯ ದುರ್ನಡತೆ ಆಗುವುದರಿಂದ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದನ್ನು ಬಾಕಿ ಇಟ್ಟು ಸದರಿ ಅಧಿಕಾರಿಯನ್ನು ಕೂಡಲೇ ಸೇವೆಯಿಂದ ಅಮಾನತ್ತಿನಲ್ಲಿಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 280 ಎಸ್‌ಜೆಡಿ 2007, ಬೆಂಗಳೂರು, ದಿನಾಂಕ: 11ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣದಿಂದಾಗಿ ಡಾ: ಟಿ. ಅನ್ನಪೂರ್ಣ, ಆಡಳಿತಾಧಿಕಾರಿ ಬಾಲಭವನ ಸೊಸೈಟಿ ಬೆಂಗಳೂರು, ಇವರನ್ನು ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 10(1)(ಎ) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1957ರ ನಿಯಮ 98(1) ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕಾರ್ಯದರ್ಶಿಗಳು, ಬಾಲಭವನ ಇವರು ಆಡಳಿತಾಧಿಕಾರಿ ಹುದ್ದೆಯ ಕಾರ್ಯಭಾರವನ್ನು ಮುಂದಿನ ಆದೇಶದವರೆಗೆ ವಹಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಪಿ.ಆರ್. 1299 ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಕೆ.ಕಾಮರಾಜ್, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು, ಸಾಕ್ಷರತಾ ಸಮಿತಿ, ತುಮಕೂರು ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿ ಕ್ರಮ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 397 ಎಸ್‌ಇಎನ್ 06 ಬೆಂಗಳೂರು, ದಿನಾಂಕ: 12ನೇ ಜೂನ್ 2007.**

ಶ್ರೀ ಕೆ.ಕಾಮರಾಜ್ ಅವರು ಜಿಲ್ಲಾ ಸಾಕ್ಷರತಾ ಸಮಿತಿಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ತುಮಕೂರು ಜಿಲ್ಲಾ ಸಾಕ್ಷರತಾ ಸಮಿತಿಯಲ್ಲಿ ಪುಸ್ತಕ ಖರೀದಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರವು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಕೆ.ಕಾಮರಾಜ್, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು ಅವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುವುದರಿಂದಲೂ,

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಕಾಮರಾಜ್, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11,11-ಎ ರಲ್ಲಿ ನಿಗದಿಪಡಿಸಿದ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1173 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಜಿ.ವಿ.ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಿಸುವ ಬಗ್ಗೆ–ಆದೇಶ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 25 ಎಸ್‌ಇಎನ್ 2005 ದಿನಾಂಕ:28.02.2005.

2) ಶ್ರೀ ಜಿ.ವಿ.ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಪ್ರತಿರಕ್ಷಣಾ ಹೇಳಿಕೆ ಸಂಖ್ಯೆ:ವೈಯಕ್ತಿಕ/ವಿಚಾರಣೆ/ಜಿ.ವಿ.ನಾ/2005–06 ದಿ:10.06.2005.

**ಪ್ರಸ್ತಾವನೆ:**

ಶ್ರೀ ಜಿ.ವಿ.ನಾಯಕ್, ನಿವೃತ್ತ ನಿರ್ದೇಶಕರು, ಅಪರ ಆಯುಕ್ತರ ಕಛೇರಿ, ಗುಲ್ಬರ್ಗಾ ಇವರು ಗುಲ್ಬರ್ಗಾದಲ್ಲಿರುವ ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾ ವಿದ್ಯಾಲಯದ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸದರಿ ಸಂಸ್ಥೆಯ

ಪೇಡ್ರಾಯಿಂಗ್ ಹಾಗೂ ವಿತರಣಾಧಿಕಾರಿಯಾಗಿ ಸಿಬ್ಬಂದಿ ವರ್ಗದವರ ಮಾಸಿಕ ವೇತನದಲ್ಲಿ ಕಟಾವಣೆಯಾಗಿದ್ದ ಕೆ.ಜಿ.ಐ.ಡಿ., ಎಲ್.ಐ.ಸಿ. ಹಣವನ್ನು ಸಂಬಂಧಿಸಿದ ಸಿಬ್ಬಂದಿ ವರ್ಗದವರ ಖಾತೆಗಳಿಗೆ ಜಮಾ ಮಾಡದೇ ರೂ.1,45,923/-ಗಳನ್ನು ದುರುಪಯೋಗಪಡಿಸಿಕೊಂಡಿರುವುದು, ನಗದು ಪುಸ್ತಕಗಳನ್ನು ಕಾಲಾನುಕಾಲಕ್ಕೆ ಬರೆಯದೇ ಇರುವುದು, ಗುಲ್ಬರ್ಗಾದಿಂದ ಸದರಿ ಸಂಸ್ಥೆಯಿಂದ ವರ್ಗಾವಣೆಯಾದಾಗ ಪ್ರಭಾರ ವಹಿಸಿಕೊಂಡ ಅಧಿಕಾರಿಗೆ ನಗದು ಪುಸ್ತಕಗಳು ಮತ್ತು ಹಣಕಾಸಿನ ಪ್ರಭಾರವನ್ನು ವಹಿಸಿಕೊಡದೇ ಇರುವುದು, ಸಂಸ್ಥೆಯಲ್ಲಿನ ತರಬೇತಿ ಚಟುವಟಿಕೆಗಳಿಗಾಗಿ ಎ.ಸಿ. ಬಿಲ್ಲಿನ ಮೂಲಕ ದಿ:25.10.2000 ರಂದು ರೂ.1.00 ಲಕ್ಷ ಡ್ರಾ ಮಾಡಿ ಈ ಹಣಕ್ಕೆ ಡಿಸೆಂಬರ್ 1999ರಿಂದ ಜೂನ್ 2000ರವರೆಗಿನ ಅವಧಿಯಲ್ಲಿ ವೆಚ್ಚಗಳನ್ನು ಭರಿಸಿರುವ ಎನ್.ಡಿ.ಸಿ. ಬಿಲ್ಲನ್ನು ತಪಾಸಣೆಗೆ ಹಾಜರ್ ಪಡಿಸಿದ್ದು, ಇದಕ್ಕೆ ತಪಾಸಣಾಧಿಕಾರಿಗಳು ಆಕ್ಷೇಪಿಸಿ, ದಿ:25.10.2000ರಂದು ಎ.ಸಿ. ಬಿಲ್ಲಿನ ಮೂಲಕ ರೂ.1.00 ಲಕ್ಷ ಡ್ರಾ ಮಾಡಿರುವುದಕ್ಕೆ ಲೆಕ್ಕ ಪತ್ರಗಳ ಸಹಿತ ರಸೀದಿಗಳನ್ನು ನಿರ್ವಹಿಸದೇ ಇರುವುದು ಹಾಗೂ 1995-96 ರಿಂದ 1999-2000ರವರೆಗೆ ಲೆಕ್ಕ ತಪಾಸಣೆಯ ವರದಿಯಂತೆ ರೂ.45,413/-ಗಳನ್ನು ವಸೂಲಾತಿಗೆ ಸೂಚಿಸಲಾಗಿದ್ದರೂ ಸಹ ಕ್ರಮ ಜರುಗಿಸದೇ ಸರ್ಕಾರಿ ಹಣ ದುರುಪಯೋಗಪಡಿಸಲು ಹಾಗೂ 1958ರ ಕರ್ನಾಟಕ ಆರ್ಥಿಕ ಸಂಹಿತೆಯಲ್ಲಿನ ಅನುಚ್ಛೇಧಗಳನ್ನು ಉಲ್ಲಂಘಿಸಿ, ಕರ್ತವ್ಯ ನಿರ್ಲಕ್ಷ್ಯತೆ, ಸರ್ಕಾರದ ಹಣ ಮತ್ತು ಅಧಿಕಾರ ದುರುಪಯೋಗ ಪಡಿಸಿರುವುದು ಮೇಲ್ನೋಟಕ್ಕೆ ದಾಖಲೆಗಳನ್ನು ಕಂಡು ಬಂದಿದ್ದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11 ಮತ್ತು 11-ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲೆ (1)ರಲ್ಲಿ ಓದಲಾದ ದಿ:28.02.2005ರಂದು ಆರೋಪಣಾ ಪಟ್ಟಿಯನ್ನು ನೋಟೀಸ್ ಮೂಲಕ ಜಾರಿಗೊಳಿಸಿ, ರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು.

ಆಪಾದಿತರಾದ ಶ್ರೀ ಜಿ.ವಿ.ನಾಯಕ್ ಇವರು ದಿ:10.06.2005ರಂದು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ, ವೇತನ ಬಿಲ್ಲು ತಯಾರಿಸುವ ಜವಾಬ್ದಾರಿಯನ್ನು ದ್ವಿತೀಯ ದರ್ಜೆ ಸಹಾಯಕರಾಗಿದ್ದ ಶ್ರೀ ಶಿವರಾಜ ಇವರಿಗೆ ವಹಿಸಲಾಗಿತ್ತೆಂದು ಇವರು ಸಿಬ್ಬಂದಿ ವೇತನದಿಂದ ಕಟಾವಣೆಯಾದ ಕೆ.ಜಿ.ಐ.ಡಿ., ಜಿ.ಪಿ.ಎಫ್ ಹಾಗೂ ಎಲ್.ಐ.ಸಿ. ಹಣವನ್ನು ಅನಧಿಕೃತವಾಗಿ ಡ್ರಾ ಮಾಡಿ ತಮ್ಮ ಸ್ವಂತಕ್ಕೆ ಕಾನೂನು ಬಾಹಿರವಾಗಿ ಉಪಯೋಗಿಸಿಕೊಂಡಿದ್ದಾರೆಂದೂ, ಈ ವಿಷಯವು ಆಪಾದಿತರ ಗಮನಕ್ಕೆ ಸಿ.ಟಿ.ಇ. ಸಂಸ್ಥೆಯಿಂದ ವರ್ಗಾವಣೆಯಾಗುವವರೆಗೂ ಗಮನಕ್ಕೆ ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಅವ್ಯವಹಾರ ಮತ್ತು ವಂಚನೆಯ ಕಾರ್ಯ ಸೆಪ್ಟೆಂಬರ್ 2001ರಲ್ಲಿ ನಡೆದಿದ್ದು ಅಂದರೆ ಆಪಾದಿತರು ವರ್ಗಾವಣೆಯಾದ ನಂತರ ಸದರಿ ಸಂಸ್ಥೆಗೆ ಪ್ರಾಂಶುಪಾಲರಾಗಿ ಹಾಜರಾದ ಶ್ರೀ ಕೆ.ಎಂ.ಶಂಕರನಾರಾಯಣ ಭಟ್ ಹಾಗೂ ಶ್ರೀ ಆರ್.ಎಸ್.ಪಾಟೀಲ್ ಇವರ ಅವಧಿಯಲ್ಲಿ ನಡೆದಿದೆ ಎಂದು, ಇದಕ್ಕೆ ತಾನು ಜವಾಬ್ದಾರಿಯಾಗುವುದಿಲ್ಲವೆಂದು ತಿಳಿಸಿದ್ದಾರೆ. ಎರಡನೇ ಆರೋಪಕ್ಕೆ ಸಂಬಂಧಿಸಿದಂತೆ ಪ್ರಾಂಶುಪಾಲರಾಗಿ ಚಾರ್ಜ್ ವಹಿಸಿಕೊಂಡ ಶ್ರೀ ಆರ್.ಎಸ್.ಪಾಟೀಲ್ ಇವರಿಗೆ ಲೆಕ್ಕಪತ್ರಗಳನ್ನು ವಹಿಸಿಕೊಡಲಾಗಿತ್ತೆಂದು, ಇವರು ಶ್ರೀ ಕೆ.ಎಂ.ಶಂಕರನಾರಾಯಣ ಭಟ್ ಇವರಿಗೆ ವಹಿಸಿಕೊಟ್ಟಿರುತ್ತಾರೆಂದೂ ತಿಳಿಸುತ್ತಾ, ತಮ್ಮ ಮೇಲಿನ ಎರಡೂ ಆರೋಪಗಳನ್ನು ಅಲ್ಲಗಳೆದಿದ್ದಾರೆ.

ಆಪಾದಿತರು ಎಸಗಿದ್ದಾರೆನ್ನಲಾದ ಆರೋಪಗಳು ಹಾಗೂ ಅವರು ನೀಡಿದ್ದ ಪ್ರತಿ ರಕ್ಷಣಾ ಹೇಳಿಕೆಗಳನ್ನು ಪರಿಶೀಲಿಸಿದಾಗ, ಆರೋಪಗಳನ್ನು ಹಣಕಾಸಿನ ದುರುಪಯೋಗಪಡಿಸಿರುವುದಕ್ಕೆ ಸಂಬಂಧಿಸಿದ್ದಾಗಿದ್ದು, ಇಂತಹ ಅವ್ಯವಹಾರ ಮತ್ತು ವಂಚನೆ ಎಸಗಲು ಯಾರು ಕಾರಣರಾಗಿದ್ದಾರೆಂಬುದನ್ನು ವಿಚಾರಣೆ ನಡೆಸುವ ಮೂಲಕವೇ ನಿರ್ಧಾರಕ್ಕೆ ಬರಲು ಸಾಧ್ಯತೆ ಆಗುವುದರಿಂದ, ಅವರ ಹೇಳಿಕೆಯನ್ನು ತಳ್ಳಿಹಾಕಿ, ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಎಸ್ಇಎನ್ 2005 ಬೆಂಗಳೂರು, ದಿನಾಂಕ: 22ನೇ ಜೂನ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಶ್ರೀ ಜಿ.ವಿ.ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11(2)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅಡಿಷನಲ್ ರೀಜನಲ್ ಕಮೀಷನರ್, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಅದೇ ನಿಯಮಾವಳಿಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಪ್ರತಿಯೊಂದು ಆರೋಪಗಳಿಗೆ ವಿಚಾರಣೆ ನಡೆಸಿ, ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ, ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ ಒದಗಿಸುವಂತೆ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1200

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀಮತಿ ಶಾಂತಿಶಂಕರ್, ನಿವೃತ್ತ ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ–ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 188 ಎಸ್ಇಎನ್ 90 ದಿನಾಂಕ:13.02.2007.

2) ಶ್ರೀಮತಿ ಶಾಂತಿಶಂಕರ್, ನಿವೃತ್ತ ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿನಾಂಕ:14.05.2007.

**ಪ್ರಸ್ತಾವನೆ:**

ಶ್ರೀಮತಿ ಶಾಂತಿಶಂಕರ್, ನಿವೃತ್ತ ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಸಮಾಜ ಕಲ್ಯಾಣ ಹಾಗೂ ಕಾರ್ಮಿಕ ಇಲಾಖೆಯ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಶ್ರೀ ಬಿ.ನಿಂಗೇಗೌಡ ಮತ್ತು ಇತರೆ ಕಛೇರಿ ಅಧೀಕ್ಷಕರು, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹುದ್ದೆಯ ಬಡ್ತಿಗೆ ಸಂಬಂಧಿಸಿದಂತೆ ಕೆ.ಎ.ಟಿ.ಯಲ್ಲಿ ಸಲ್ಲಿಸಿದ್ದ ಅರ್ಜಿಯಲ್ಲಿ ಕೆ.ಎ.ಟಿ. ಆದೇಶವನ್ನು ಅನುಷ್ಠಾನಗೊಳಿಸುವಲ್ಲಿ ಮೇಲಾಧಿಕಾರಿಗಳಿಗೆ ತಪ್ಪು ಮಾಹಿತಿ ನೀಡಿ ಕೆ.ಎ.ಟಿ. ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಕಾನೂನು ಇಲಾಖೆಯನ್ನು ಮತ್ತು ಸರ್ಕಾರಿ ವಕೀಲರನ್ನು ಕೋರಿದ್ದಾಗ್ಯೂ ಇದ್ಯಾವುದನ್ನೂ ಗಮನಕ್ಕೆ ತೆಗೆದುಕೊಳ್ಳದೇ ನಿರ್ದೇಶಕರಿಂದ ಸೂಕ್ತ ಪ್ರಸ್ತಾವನೆಯನ್ನು ಪಡೆಯದೇ ಮತ್ತು ಇಲಾಖಾ ಮುಂಬಡ್ತಿಯ ಅಭಿಪ್ರಾಯ/ಅನುಮೋದನೆ ಪಡೆಯದೇ ಶ್ರೀ ಬಿ.ನಿಂಗೇಗೌಡ ಅವರಿಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಲು ಶಿಫಾರಸ್ಸು ಮಾಡಿದ ದುರ್ನಡತೆ ಹಾಗೂ ಶ್ರೀ ಎಲ್.ಜಿ.ರಾಥೋಡ್ ಎಂಬ ಪರಿಶಿಷ್ಟ ಜಾತಿಯ ಅಭ್ಯರ್ಥಿಗೆ ಮುಂಬಡ್ತಿಗೆ ಪರಿಗಣಿಸಲು ಆಗದು ಎಂದು ಶಿಫಾರಸ್ಸು ಮಾಡಿದ ದುರ್ನಡತೆಗೆ ಸಂಬಂಧಿಸಿದ ಆರೋಪಕ್ಕಾಗಿ ಶ್ರೀಮತಿ ಶಾಂತಿಶಂಕರ್, ನಿವೃತ್ತ ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿ:13.02.2007ರ ನೋಟೀಸ್ ಹಾಗೂ ದೋಷಾರೋಪಣೆಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಆರೋಪಿತರು ಮೇಲೆ (2)ರಲ್ಲಿ ಓದಲಾದ ದಿ:14.05.07ರ ಉತ್ತರ ಸಲ್ಲಿಸಿ, ಶ್ರೀ ಬಿ.ನಿಂಗೇಗೌಡರಿಗೆ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮುಂಬಡ್ತಿ ನೀಡಲು ಮೇಲಾಧಿಕಾರಿಗಳು ನಿರ್ಣಯಿಸಿದಂತೆ ಕಡತ ಸಂಖ್ಯೆ:ಎಸ್‌ಡಬ್ಲ್ಯೂಎಲ್ 194 ಎಸ್ಇಟಿ 85ರಲ್ಲಿ ಪ್ರಸ್ತಾಪಿಸಲಾಗಿದೆಯೇ ವಿನ: ಅದು ತಮ್ಮೊಬ್ಬಳ ಅನಿಸಿಕೆ ಅಥವಾ ತೀರ್ಮಾನವಲ್ಲವೆಂದು ತಿಳಿಸಿ, ಸರ್ಕಾರದ ಉಪ ಕಾರ್ಯದರ್ಶಿಗಳು ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಸರ್ಕಾರದ ಹಂತದಲ್ಲಿ ಜಂಟಿಯಾಗಿ ಜವಾಬ್ದಾರಿ ಹೊಂದಿದ್ದು ತಮ್ಮನ್ನು ಮಾತ್ರ ಹೊಣೆಗಾರರನ್ನಾಗಿ ನಿರೂಪಿಸ ಹೊರಟಿರುವುದು ಕಾನೂನಾತ್ಮಕವಾಗಿ ಸರಿಯಲ್ಲವೆಂದು ತಿಳಿಸಿರುತ್ತಾರೆ. ನ್ಯಾಯಾಲಯಗಳ ಆದೇಶವನ್ನು ಪಾಲಿಸುವ ಉದ್ದೇಶವನ್ನು ಮಾನ್ಯ ಪ್ರಧಾನ ಕಾರ್ಯದರ್ಶಿಗಳೇ ಅನುಮೋದಿಸಿ ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸಿ, ಇದರಲ್ಲಿ ತಮ್ಮದೇನೂ ಲೋಪ ಇರುವುದಿಲ್ಲವೆಂದು ಹಾಗೂ ವಿಶೇಷ ತಕರಾರು ಅರ್ಜಿ ಸರ್ವೋಚ್ಚ ನ್ಯಾಯಾಲಯದಿಂದ ತೀರಸ್ಕೃತವಾಗಿದ್ದು, ಅಧಿಕಾರಿಯು ಮುಂಬಡ್ತಿ ಹೊಂದಿ ನಿವೃತ್ತರಾಗಿರುತ್ತಾರೆ. ಇದರಿಂದಾಗಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವುಂಟಾಗಿರುವುದಿಲ್ಲ ಹಾಗೂ ಯಾವುದೇ ನೌಕರರ ಜೇಷ್ಠತೆಗೆ ಭಂಗ ಉಂಟಾಗಿರುವುದಿಲ್ಲವೆಂದು ತಿಳಿಸಿ, ಹಲವಾರು ವರ್ಷಗಳು ಗತಿಸಿದ ನಂತರ ತಮ್ಮ ಮೇಲೆ ಶಿಸ್ತು ಪ್ರಕರಣ ನಡೆಸಲು ಸಮರ್ಥನೀಯ ಕಾರಣಗಳಿಲ್ಲವಾದ್ದರಿಂದ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರ ಉತ್ತರವನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಆರೋಪಿತರು ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಕ್ರಮ ಕೈಗೊಂಡಿರುವುದಾಗಿ ಕಂಡು ಬರುತ್ತದೆ. ಶ್ರೀ ಬಿ.ನಿಂಗೇಗೌಡ ಎಂಬುವವರಿಗೆ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮುಂಬಡ್ತಿ ನೀಡಲು ಮೇಲಾಧಿಕಾರಿಗಳ ನಿರ್ಣಯದಂತೆ ಕ್ರಮ ಕೈಗೊಂಡಿರುವುದು ಕಂಡು ಬರುತ್ತದೆ ಮತ್ತು ನ್ಯಾಯಾಲಯದ ಆದೇಶವನ್ನು ಪಾಲಿಸುವ ಉದ್ದೇಶವನ್ನು ಕಾರ್ಯದರ್ಶಿಯವರು ಅನುಮೋದಿಸಿ ಶಿಫಾರಸ್ಸು ಮಾಡಿದ್ದರನ್ವಯ ಕ್ರಮ ಕೈಗೊಂಡಿರುವುದು ಕಂಡು ಬರುತ್ತದೆ. ಈ ಪ್ರಕರಣಕ್ಕೆ ಸಂಬಂಧಪಟ್ಟ ವಿಶೇಷ ತಕರಾರು ಅರ್ಜಿ ಸರ್ವೋಚ್ಚ ನ್ಯಾಯಾಲಯದಿಂದ ತಿರಸ್ಕೃತವಾಗಿದ್ದು, ನ್ಯಾಯಾಲಯದ ಆದೇಶವೇ ಅಂತಿಮವಾಗಿರುವುದರಿಂದ ಹಾಗೂ ಇದರಿಂದಾಗಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವುಂಟಾಗದೇ ಇರುವುದರಿಂದ ಹಾಗೂ ಅವರೊಬ್ಬರನ್ನೇ ಹೊಣೆಗಾರರನ್ನಾಗಿ ಮಾಡಿ ಇಲಾಖಾ ವಿಚಾರಣೆಯನ್ನು ನಡೆಸುವ ಅಗತ್ಯ ಕಂಡು ಬರುವುದಿಲ್ಲವಾದ್ದರಿಂದ ಆರೋಪಿತರ ಉತ್ತರವನ್ನು ಒಪ್ಪಿ ಅವರನ್ನು ಆರೋಪಮುಕ್ತರನ್ನಾಗಿ ಮಾಡಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 188 ಎಸ್ಇಎನ್ 1990, ಬೆಂಗಳೂರು ದಿನಾಂಕ:25ನೇ ಜೂನ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀಮತಿ ಶಾಂತಿಶಂಕರ್, ನಿವೃತ್ತ ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರನ್ನು ದಿನಾಂಕ:13.02.2007ರ ನೋಟೀಸಿನಲ್ಲಿ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1201 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಸಿ.ಎಂ.ಈಶ್ವರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ– ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಎಸ್ಇಎನ್ 93 ದಿನಾಂಕ:15.07.1993.
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಎಸ್ಇಎನ್ 93 ದಿನಾಂಕ:12.08.1994.
3) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಎಸ್ಇಎನ್ 93 ದಿನಾಂಕ:08.02.2005.
4) ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರ ವಿಚಾರಣಾ ವರದಿ ದಿನಾಂಕ:05.04.2006.

**ಪ್ರಸ್ತಾವನೆ:**

ಶ್ರೀ ಸಿ.ಎಂ.ಈಶ್ವರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಮೈಸೂರು ಜಿಲ್ಲೆ, ನಂಜನಗೂಡು ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಅವರ ವ್ಯಾಪ್ತಿಯಲ್ಲಿ ಬರುತ್ತಿದ್ದ ಯಳಂದೂರು ತಾಲ್ಲೂಕಿನ ಗುಂಬಳ್ಳಿ, ಗಳಿಗನೂರು, ಯರೀಯೂರು, ಕೆ.ದೇವರಹಳ್ಳಿ, ಯರಂಗಬಳ್ಳಿ ಗ್ರಾಮಗಳಲ್ಲಿ ಕರೀಕಲ್ಲಿನ ಅನಧಿಕೃತ ಗಣಿಗಾರಿಕೆ ಮತ್ತು ಸಾಗಾಣಿಕೆ ತಡೆಗಟ್ಟುವಲ್ಲಿ ವಿಫಲವಾಗಿ ಸರ್ಕಾರಕ್ಕೆ ಕೋಟ್ಯಂತರ ಆಸ್ತಿ ನಷ್ಟವುಂಟು ಮಾಡಿದ ಆರೋಪ ಹಾಗೂ ಅನಧಿಕೃತ ಗಣಿಗಾರಿಕೆಯಿಂದ ಯಳಂದೂರು ತಾಲ್ಲುಕಿನ ಗುಂಬಳ್ಳಿ, ಗಣಿಗನೂರು ಗ್ರಾಮಗಳಲ್ಲಿ ಪುರಾತನ ಕಲ್ಲಿನ ಮಂಟಪ ಹಾಗೂ ದೇವಸ್ಥಾನಗಳಿಗೆ ಅಪಾಯವುಂಟು ಮಾಡಿದಾಗ ಪೂಜಾ ಸ್ಥಳಗಳ ರಕ್ಷಣೆಗಾಗಿ ಉಪ ವಿಭಾಗಾಧಿಕಾರಿ ಮಟ್ಟದ ಮುಜರಾಯಿ ಅಧಿಕಾರಿಯಾಗಿ ಕ್ರಮ ಕೈಗೊಳ್ಳದ ಆರೋಪದ ಸಂಬಂಧ ಮೇಲೆ (1)ರಲ್ಲಿ ಓದಲಾದ ದಿ:15.07.93ರ ಸರ್ಕಾರಿ ಆದೇಶದಲ್ಲಿ ಅವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿಟ್ಟು, ಸೇವೆಯಿಂದ ಅಮಾನತ್ತುಗೊಳಿಸಿ ಆದೇಶ ಹೊರಡಿಸಲಾಯಿತು. ನಂತರ ಮೇಲೆ (2)ರಲ್ಲಿ ಓದಲಾದ ದಿ:12.08.94ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿಟ್ಟು ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು. ತದನಂತರ ಮೇಲ್ಕಂಡ ಆರೋಪಗಳ ಕುರಿತು ವಿಚಾರಣೆ ಮಾಡಲು ಮೇಲೆ (3)ರಲ್ಲಿ ಓದಲಾದ ದಿ:08.02.05ರ ಸರ್ಕಾರಿ ಆದೇಶದಲ್ಲಿ ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (4)ರಲ್ಲಿ ಓದಲಾದ ದಿ:05.04.06ರಂದು ವಿಚಾರಣಾ ವರದಿಯನ್ನು ಸಲ್ಲಿಸಿ, ಆರೋಪಿತರ ವಿರುದ್ಧ ಮಾಡಲಾದ ಮೂರು ಆರೋಪಗಳ ಕುರಿತಂತೆ ಲಿಖಿತ ವಾದ ಹಾಜರುಪಡಿಸಲಾದ ಸಾಕ್ಷ್ಯವನ್ನು ಪರಿಶೀಲಿಸಿ, ಈ ಇಲಾಖಾ ವಿಚಾರಣೆಯಲ್ಲಿ ಸಾಕ್ಷ್ಯ ಅಧಿನಿಯಮದ ಸಂಶಯಾತೀತವಾಗಿ ರುಜುವಾತು ಪಡಿಸಬಲ್ಲಬೇಕಾಗಿಲ್ಲವಾದಾಗ್ಯೂ ಸಂಗತಿಗಳ ಸಂಭಾವ್ಯತೆಯ ಸಿದ್ದಾಂತದ ಮೇರೆಗೆ ಸ್ವಾಭಾವಿಕ ನ್ಯಾಯಾದಾನದ ತತ್ವಗಳ ಆಧಾರದ ಮೇಲೆ ಪರಿಶೀಲಿಸಿದಾಗ ಅಲ್ಲಿ ಹಾಜರುಪಡಿಸಿದ ಸಾಕ್ಷ್ಯ ಆಪಾದಿತರು ಅಕ್ರಮ ಗಣಿಗಾರಿಕೆ ತಡೆಗೆ ಯಾವ ಕ್ರಮವನ್ನು ತೆಗೆದುಕೊಳ್ಳದಿರುವುದು ಸಂಭವನೀಯ ಎಂದು ನಿರ್ಣಯಿಸಲಾದರೂ ಸಾಕಷ್ಟಿಲ್ಲದಿರುವುದರಿಂದ ಆರೋಪಿತರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ನಿರ್ಣಯ ನೀಡಿರುತ್ತಾರೆ.

ಇದೇ ಪ್ರಕರಣದಲ್ಲಿ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಅಧಿಕಾರಿ/ನೌಕರರ ವಿರುದ್ಧದ ಆರೋಪಗಳಲ್ಲಿ ಯಾವುದೇ ಹುರುಳಿಲ್ಲವೆಂದು ಅವರುಗಳನ್ನು ಸದರಿ ಇಲಾಖೆಯು ಆರೋಪಮುಕ್ತರನ್ನಾಗಿಸಿದೆ. ಕಂದಾಯ ಇಲಾಖೆಯು ಕೆಳಹಂತದ ಅಧಿಕಾರಿ/ನೌಕರರ ವಿರುದ್ಧ ವಿಚಾರಣೆ ನಡೆಸುತ್ತಿದೆ. ವಿಚಾರಣಾ ವರದಿ ಮತ್ತು ಈ ಎಲ್ಲಾ ಅಂಶಗಳನ್ನು ಸರ್ಕಾರವು ಪರಿಶೀಲಿಸಿದೆ. ಆರೋಪಿತರು ಯಳಂದೂರು ತಾಲ್ಲೂಕಿನ ವಿವಿಧ ಗ್ರಾಮಗಳಲ್ಲಿನ ಕರಿಕಲ್ಲು ನಿಕ್ಷೇಪದ ಅಕ್ರಮ ಗಣಿಗಾರಿಕೆಯಲ್ಲಿ ಭಾಗಿಯಾಗಿರುವ ಕುರಿತಂತೆ ಯಾವುದೇ ಸಾಕ್ಷಿಯು ತಿಳಿಸಿಲ್ಲ. ಈ ಗಣಿಗಾರಿಕೆಗಳಲ್ಲಿ ಕೆಲವಕ್ಕೆ ಪರವಾನಗಿಗಳಿದ್ದು, ಅವುಗಳೆಲ್ಲವೂ ಅಕ್ರಮವೆಂದು ಹೇಳಲು ಬರುವುದಿಲ್ಲ. ಅಕ್ರಮ ಗಣಿಗಾರಿಕೆ ತಡೆಯಲು ಕ್ರಿಮಿನಲ್ ಮೊಕದ್ದಮೆ ದಾಖಲಿಸಿರುವುದು ಮತ್ತು ಅಧೀನ ಸಿಬ್ಬಂದಿಗೆ ಇದನ್ನೂ ತಡೆಗಟ್ಟಲು ಕ್ರಮ ತೆಗೆದುಕೊಳ್ಳಲು ತಿಳಿಸಿರುವ ಅಂಶಗಳನ್ನು ಪರಿಶೀಲಿಸಿದಲ್ಲಿ ಇವರು ಅಕ್ರಮ ಗಣಿಗಾರಿಕೆಯಲ್ಲಿ ಭಾಗಿಯಾಗಿದ್ದಾರೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಕಂದಾಯ ಇಲಾಖೆಯು ತನ್ನ ಇತರೆ ಅಧಿಕಾರಿ/ನೌಕರರ ಮೇಲೆ ನಡೆಸುತ್ತಿರುವ ಇಲಾಖಾ ವಿಚಾರಣೆಯಲ್ಲಿ ತೆಗೆದುಕೊಳ್ಳುವ ನಿರ್ಣಯವನ್ನು ಕಾಯುವುದು ಸೂಕ್ತವಲ್ಲ. ಇಲಾಖಾ ವಿಚಾರಣೆಯಲ್ಲಿ ಪ್ರತಿಯೊಂದು ಪ್ರಕರಣದಲ್ಲಿ ಸಾಕ್ಷಿಗಳ ಹಾಗೂ ದಾಖಲೆಗಳ ಮೌಲ್ಯ ಮಾಪನ ಆಧಾರದ ಮೇಲೆ ಸೂಕ್ತ ನಿರ್ಣಯ ತೆಗೆದುಕೊಳ್ಳಬೇಕಾಗುತ್ತದೆ. ಆದ್ದರಿಂದ ಸದರಿ ಅಧಿಕಾರಿಯವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ನಿರ್ಣಯ ನೀಡಿರುವ ವಿಚಾರಣಾ ವರದಿಯನ್ನು ಒಪ್ಪದೇ ಇರಲು ಯಾವುದೇ ಸಕಾರಣಗಳು ಕಂಡು ಬರುವುದಿಲ್ಲವಾದ್ದರಿಂದ ಆರೋಪಿತರ ವಿರುದ್ಧ ಮಾಡಲಾದ

ಆರೋಪಗಳು ಸಾಬೀತಾಗಿಲ್ಲವೆಂದು ನಿರ್ಣಯ ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿ ಅವರನ್ನು ಆರೋಪಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಎಸ್‌ಇಎನ್ 1993, ಬೆಂಗಳೂರು ದಿನಾಂಕ: 23ನೇ ಜೂನ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಸಿ.ಎಂ.ಈಶ್ವರ್, ನಿವೃತ್ತ ಕೆಎಎಸ್ ಅಧಿಕಾರಿ ಅವರನ್ನು ದಿನಾಂಕ:08.02.2005ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1202 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಎ.ಬಿ.ಇಬ್ರಾಹಿ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸುವಂತೆ ಕೋರಿ ಸಲ್ಲಿಸಲಾಗಿದ್ದ ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ತಿರಸ್ಕರಿಸಿ ಶಿಸ್ತು ಕ್ರಮವನ್ನು ಕೈಬಿಡುವ ಬಗ್ಗೆ–ಆದೇಶ.

**ಓದಲಾಗಿದೆ:** ಕರ್ನಾಟಕ ಲೋಕಾಯುಕ್ತ ನಿಬಂಧಕರ ಪತ್ರ ಸಂಖ್ಯೆ: ಕಂಪ್ಲೆಂಟ್/ಲೋಕ್/ಎಂವೈಎಸ್–89/03/ ಎಆರ್‌ಎಲ್‌ಓ–4 ದಿನಾಂಕ:07.03.2006.

**ಪ್ರಸ್ತಾವನೆ:**

ಶ್ರೀ ಎ.ಬಿ.ಇಬ್ರಾಹಿಂ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರು ಮೈಸೂರು ಮಹಾನಗರ ಪಾಲಿಕೆಯ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀಮತಿ ಸಿದ್ದಿಕಿ ಬೇಗಂ, ಮೈಸೂರು ಅವರು ಹೊಂದಿರುವ ಮೈಸೂರು ನಗರದ ಮಂಡಿಮೊಹಲ್ಲಾ, ಮೇದರ್ ಬ್ಲಾಕ್, ಬೊಂಬು ಬಜಾರ್, ಇಂಡಸ್ಟ್ರಿಯಲ್–ಎ ಲೇಔಟ್‌ನಲ್ಲಿನ ನಿವೇಶನ ಸಂಖ್ಯೆ:95ಎ ರಲ್ಲಿ ಪ್ಲಾಸ್ಟಿಕ್ ಗ್ರಾನ್ಯೂಯಲ್ ತಯಾರಿಕೆ ಫ್ಯಾಕ್ಟರಿ ಉದ್ದಿಮೆ ನಡೆಸಲು ಆಯುಕ್ತರು, ಮೈಸೂರು ಮಹಾನಗರ ಪಾಲಿಕೆ ಅವರು 2001–02ರಲ್ಲಿ ಲೈಸೆನ್ಸ್ ನೀಡಿರುತ್ತಾರೆಂದು ಆರೋಪಿಸಿ ಶ್ರೀಮತಿ ಎನ್.ಭಾರತಿ, ಮಹಾಪೌರರರು, ಮೈಸೂರು ಮಹಾನಗರ ಪಾಲಿಕೆ, ಮೈಸೂರು ಅವರು ದಿ:24.09.03ರಂದು ಲೋಕಾಯುಕ್ತಕ್ಕೆ 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 7(2) ರನ್ವಯ ದೂರನ್ನು ಸಲ್ಲಿಸಿದ್ದರು. ಹಾಗೂ ಈ ನಿವೇಶನ ಹೊಂದಿರುವ ಪ್ರದೇಶವು ವಸತಿ ಪ್ರದೇಶವಾಗಿದ್ದು, ಈ ಉದ್ದಿಮೆಯನ್ನು ನಡೆಸಲು ರಹದಾರಿ ನೀಡಿರುವುದರಿಂದ ಸ್ಥಳೀಯ ನಾಗರೀಕರಿಗೆ ಶಬ್ದ ಮಾಲಿನ್ಯ ಮತ್ತು ವಾಯು ಮಾಲಿನ್ಯದಿಂದ ತೊಂದರೆಯಾಗಿರುವುದಾಗಿ ತಮ್ಮ ದೂರಿನಲ್ಲಿ ವಿವರಿಸಿದ್ದರು. ಸದರಿ ದೂರಿನ ಮೇರೆಗೆ ತನಿಖೆ ನಡೆಸಿದ ಸನ್ಮಾನ್ಯ ಲೋಕಾಯುಕ್ತರವರು ಅವರ ವಿರುದ್ಧ ಮಾಡಲಾದ ಆರೋಪವು ಮೇಲ್ನೋಟಕ್ಕೆ ಸತ್ಯವಾಗಿ ಕಂಡು ಬರುತ್ತಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ತಮಗೆ ವಹಿಸುವಂತೆ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿಯಲ್ಲಿ ಮಾಡಲಾಗಿದ್ದ ದಿ:04.03.06ರ ಶಿಫಾರಸ್ಸನ್ನು ಮೇಲೆ ಓದಲಾದ ದಿ:07.03.06ರ ಪತ್ರದೊಂದಿಗೆ ಲೋಕಾಯುಕ್ತ ನಿಬಂಧಕರು ಸರ್ಕಾರಕ್ಕೆ ಸಲ್ಲಿಸಿದ್ದರು.

ಸನ್ಮಾನ್ಯ ಲೋಕಾಯುಕ್ತರ ದಿ:04.03.06ರ ಶಿಫಾರಸ್ಸನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಸದರಿ ನಿವೇಶನವು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಫ್ಯಾಕ್ಟರಿ ಸೈಟಾಗಿ ಮಂಜೂರಾಗಿದ್ದು, ಜಿಲ್ಲಾ ಕೈಗಾರಿಕಾ ಕೇಂದ್ರದಿಂದ ಅನುಮತಿಯನ್ನು ಪಡೆದಿದ್ದ ಕಾರಣ ನಗರ ಪಾಲಿಕೆಯ ಹಿಂದಿನ ಆಯುಕ್ತರವರು ದಿ:06.05.02ರಂದು ಪ್ಲಾಸ್ಟಿಕ್ ಗ್ರಾನ್ಯೂಯಲ್ ತಯಾರಿಕೆ ಫ್ಯಾಕ್ಟರಿ ನಡೆಸಲು ರಹದಾರಿ ನೀಡಿರುತ್ತಾರೆ. ಈ ರಹದಾರಿಯನ್ನು ಶ್ರೀ ಎ.ಬಿ.ಇಬ್ರಾಹಿಂ ಅವರು ನೀಡಿರುವುದಿಲ್ಲ. ಆದರೆ, ಸನ್ಮಾನ್ಯ ಲೋಕಾಯುಕ್ತರ ನಿರ್ದೇಶನದನ್ವಯ ಲೈಸನ್ಸ್ ನೀಡುವಲ್ಲಿ ಅಂದಿನ ಮೈಸೂರು ಮಹಾನಗರ ಪಾಲಿಕೆಯ ಆಯುಕ್ತರು ಅನುಸರಿಸಬೇಕಾದ ವಿಧಿವಿಧಾನಗಳನ್ನು ಅನುಸರಿಸಿದ್ದಾರೆಯೇ ಅಥವಾ ಇಲ್ಲವೇ ಎಂಬುದನ್ನು ಪರಿಶೀಲಿಸಿ ಲೋಕಾಯುಕ್ತರಿಗೆ ವರದಿ ನೀಡಿರುತ್ತಾರೆ. ಅವರು ಪ್ರಕರಣವನ್ನು ಮತ್ತೆ ಪರಿಶೀಲಿಸಿ ಮೈಸೂರು ಮಹಾನಗರ ಪಾಲಿಕೆಯ ದಿ:15.03.06ರ ಆದೇಶದಲ್ಲಿ ಸದರಿ ಲೈಸೆನ್ಸ್‌ನ್ನು ರದ್ದುಪಡಿಸಿ ಉದ್ದಿಮೆಯನ್ನು ತಕ್ಷಣದಿಂದ ಮುಚ್ಚುವಂತೆ ಆದೇಶಿಸಿರುವರು. ಆರೋಪಿತರು ಲೋಕಾಯುಕ್ತರವರು ಎಲ್ಲಾ ಸಂದರ್ಭಗಳಲ್ಲಿಯೂ ನೀಡಿದ ಆದೇಶಗಳನ್ನು ಪಾಲಿಸಿ ಅದರಂತೆ ಕ್ರಮ ಕೈಗೊಂಡಿರುವುದರಿಂದ ಈ ಪ್ರಕರಣದಲ್ಲಿ ಅವರು ಕರ್ತವ್ಯಲೋಪ ಎಸಗಿರುವುದು ಕಂಡು ಬರುತ್ತಿಲ್ಲ. ಆದ್ದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲ್ನೋಟಕ್ಕೆ ಸಕಾರಣ ಕಂಡು ಬರುವುದಿಲ್ಲ. ಈ ಪ್ರಕರಣದ ಕುರಿತು ದೂರು ಬರುವ ತನಕ ಯಾವುದೇ ಕ್ರಮವನ್ನು ತೆಗೆದುಕೊಳ್ಳದೇ ಇರುವುದು ಮಾತ್ರ ಇವರ ಕರ್ತವ್ಯಲೋಪವಾಗಿದ್ದು, ಅದಕ್ಕಾಗಿ ಇವರಿಗೆ ಎಚ್ಚರಿಕೆಯನ್ನು ನೀಡಿ ಇನ್ನು ಮುಂದೆ ಇಂತಹ ಪ್ರಕರಣಗಳಲ್ಲಿ ಜಾಗರೂಕತೆ ಮತ್ತು circumspect ದಿಂದ ವರ್ತಿಸಲು ಎಚ್ಚರಿಕೆ ನೀಡಿದರೆ ಸಾಕೆಂದು ಸರ್ಕಾರವು ಭಾವಿಸಿ ಸನ್ಮಾನ್ಯ ಲೋಕಾಯುಕ್ತರವರು ಲೋಕಾಯುಕ್ತ ಕಾಯ್ದೆ ಕಲಂ 12(3) ರಡಿಯಲ್ಲಿ ಮಾಡಿದ ಶಿಫಾರಸ್ಸನ್ನು ಒಪ್ಪದಿರಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 121 ಎಸ್‌ಇಎನ್ 2006, ಬೆಂಗಳೂರು, ದಿನಾಂಕ: 3ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಶ್ರೀ ಎ.ಬಿ.ಇಬ್ರಾಹಿಂ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ತಮಗೆ ವಹಿಸುವಂತೆ 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿಯಲ್ಲಿ ಸನ್ಮಾನ್ಯ ಲೋಕಾಯುಕ್ತರವರು ಮಾಡಿರುವ ದಿನಾಂಕ:04.03.2006ರ ಶಿಫಾರಸ್ಸನ್ನು ಒಪ್ಪದಿರಲು ತೀರ್ಮಾನಿಸಿದೆ ಹಾಗೂ ಇನ್ನು ಮುಂದೆ ಇಂತಹ ಪ್ರಕರಣಗಳಲ್ಲಿ ಜಾಗರೂಕತೆ ಮತ್ತು circumspect ದಿಂದ ವರ್ತಿಸಲು ಶ್ರೀ ಎ.ಬಿ.ಇಬ್ರಾಹಿಂ, ಕೆಎಎಸ್ ಅಧಿಕಾರಿ ರವರಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1274

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಕುರಿತಂತೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 60 ಎಸ್‌ಇಎನ್ 92 ದಿನಾಂಕ:30.03.2001.
2) ವಿಚಾರಣಾ ವರದಿ ಕ್ರಮಾಂಕ: ಲೋಕ್/ಎಆರ್‌ಇ–4/ಇಎನ್‌ಕ್ಯೂ–08/2001–02 ದಿನಾಂಕ: 15.02.2005.
3) ಉಪ ಲೋಕಾಯುಕ್ತರ ಪತ್ರ ಸಂಖ್ಯೆ: ಲೋಕ್/ಎಆರ್‌ಇ–4/ಇಎನ್‌ಕ್ಯೂ–08/2001–02 ದಿನಾಂಕ: 18.11.2005.
4) ನೋಟೀಸ್ ಸಂಖ್ಯೆ:ಸಿಆಸುಇ 60 ಎಸ್‌ಇಎನ್ 92 ದಿನಾಂಕ:07.12.2005.
5) ಶ್ರೀ ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರ ದಿನಾಂಕ:06.01.2006ರ ಉತ್ತರ.
6) ಸರ್ಕಾರದ ಪತ್ರ ಸಂಖ್ಯೆ:ಸಿಆಸುಇ 60 ಎಸ್‌ಇಎನ್ 92 ದಿನಾಂಕ:30.10.2006.
7) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಅವರ ಪತ್ರ ಸಂಖ್ಯೆ: ಪಿಎಸ್‌ಸಿ/146/ಸಿಎನ್‌ಎಸ್/06, ದಿನಾಂಕ: 23.2.2007.

**ಪ್ರಸ್ತಾವನೆ:–**

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಶ್ರೀ ಎಸ್.ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಅಪರ ವಿಶೇಷ ಭೂಸ್ವಾಧೀನಾಧಿಕಾರಿ ಹುದ್ದೆಯಲ್ಲಿ, ಶ್ರೀ ಜಯರಾಮ್ ಅವರು ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ, ಶ್ರೀ ರಹಮತುಲ್ಲಾ ಅವರು ಕಂದಾಯ ನಿರೀಕ್ಷಕರ ಹುದ್ದೆಯಲ್ಲಿ, ಶ್ರೀ ಜಯರಾಜ್, ಕಂದಾಯ ನಿರೀಕ್ಷಕರು ಅವರು ಮಡಿವಾಳ ಗ್ರಾಮ ಪಂಚಾಯಿತಿ ಲೆಕ್ಕಿಗರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಹೊಸೂರು–ಸರ್ಜಾಪುರ ರಸ್ತೆಯ ಬಡಾವಣೆ ನಿರ್ಮಾಣಕ್ಕಾಗಿ 1990ರಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಸ್ವಾಧೀನಪಡಿಸಿಕೊಂಡ ಬೇಗೂರು ಹೋಬಳಿ, ವೆಂಕೋಜಿರಾವ್ ಖಾನೆ ಸ.ನಂ.11ರಲ್ಲಿ 136 ಎಕರೆ 30 ಗುಂಟೆ ಜಮೀನಿನ ಪೈಕಿ 7 ಎಕರೆ 30 ಗುಂಟೆ ಜಮೀನಿಗೆ ಶ್ರೀಮತಿ ರಾಜಮ್ಮ ಎಂಬ ಸುಳ್ಳು ಮಹಿಳೆಯು ಪರಿಹಾರ ಧನ ಪಡೆಯಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಸಲ್ಲಿಸಿದ್ದ ದಿ:12.03.90ರ ಅರ್ಜಿಯ ಜೊತೆಗೆ ಲಗತ್ತಿಸಿದ ದಾಖಲೆಗಳಾದ ಇನಾಂ ರದ್ದತಿ ಆದೇಶದ ಪ್ರತಿ, ವಿಶೇಷ ಜಿಲ್ಲಾಧಿಕಾರಿಗಳ ದೃಢೀಕರಣ ಪತ್ರದ ಪ್ರತಿ, ಭೂಕಂದಾಯ ಪಾವತಿಸಿದ ಪ್ರತಿ, ಆರ್.ಟಿ.ಸಿ. ಪ್ರತಿ, ಮ್ಯುಟೇಷನ್ ರಿಜಿಸ್ಟರ್‌ನ ಪ್ರತಿ, ಕಂದಾಯ ಬಾಕಿ ರಹಿತ ಪತ್ರದ ಪ್ರತಿ ಇತ್ಯಾದಿ ಖೋಟಾ ದಾಖಲೆಗಳನ್ನು ಅವುಗಳ ನೈಜತೆಯನ್ನು ಪರಿಶೀಲಿಸದೇ, ಅವುಗಳ ಆಧಾರದ ಮೇಲೆ ರೂ.8,67,535/–ಗಳನ್ನು ನೀಡುವುದರ ಮೂಲಕ ತಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ ಎಸಗಿ ತೀವ್ರತರವಾದ ದುರ್ನಡತೆ ಎಸಗಿರುವ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರನ್ವಯ ಮೇಲ್ಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಮಾಡಲಾಗಿದ್ದ ಆರೋಪಗಳ ಬಗ್ಗೆ ಪೂರ್ಣ ಪ್ರಮಾಣದ ಜಂಟಿ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರ ಮೂಲಕ ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ:30.03.2001ರಂದು ಆದೇಶ ಹೊರಡಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಹೆಚ್ಚುವರಿ ನಿಬಂಧಕರು ವಿಚಾರಣೆಗಳು–4 ಅವರು ವಿಚಾರಣೆ ನಡೆಸಿ ಮೇಲೆ (2)ರಲ್ಲಿ ಓದಲಾದ ದಿನಾಂಕ:15.02.2005ರ ವಿಚಾರಣಾ ವರದಿಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಉಪ ಲೋಕಾಯುಕ್ತರವರು ವಿಚಾರಣಾ ವರದಿ ಹಾಗೂ ದಾಖಲೆಗಳೊಂದಿಗೆ ಸಲ್ಲಿಸಿರುವ ತನ್ನ ಶಿಫಾರಸ್ಸಿನಲ್ಲಿ, ಶ್ರೀ ಎಸ್.ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಪರ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಇವರು ಹೊಸೂರು–ಸರ್ಜಾಪುರ ರಸ್ತೆ ಬಡಾವಣೆ ನಿರ್ಮಾಣಕ್ಕಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದವರು ಸ್ವಾಧೀನಪಡಿಸಿಕೊಂಡಿದ್ದ ಬೇಗೂರು ಹೋಬಳಿ, ವೆಂಕೋಜಿರಾವ್ ಖಾನೆ ಸ.ನಂ.11ರಲ್ಲಿನ 136 ಎಕರೆ 30 ಗುಂಟೆ ಜಮೀನಿನ ಪೈಕಿ 7 ಎಕರೆ 30 ಗುಂಟೆ ಜಮೀನಿಗೆ ಶ್ರೀಮತಿ ರಾಜಮ್ಮ ಎಂಬ ಸುಳ್ಳು ಮಹಿಳೆಯು ಪರಿಹಾರ ಧನ ಪಡೆಯಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಸಲ್ಲಿಸಿದ್ದ ದಿ:12.03.90ರ ಅರ್ಜಿಯ ಜೊತೆಗೆ

ಲಗತ್ತಿಸಿದ ದಾಖಲೆಗಳಾದ ಇನಾಂ ರದ್ದತಿ ಆದೇಶದ ಪ್ರತಿ, ವಿಶೇಷ ಜಿಲ್ಲಾಧಿಕಾರಿಗಳ ದೃಢೀಕರಣ ಪತ್ರದ ಪ್ರತಿ, ಭೂಕಂದಾಯ ಪಾವತಿಸಿದ ಪ್ರತಿ, ಆರ್.ಟಿ.ಸಿ. ಪ್ರತಿ, ಮ್ಯುಟೇಷನ್ ರಿಜಿಸ್ಟರ್‌ನ ಪ್ರತಿ, ಕಂದಾಯ ಬಾಕಿ ರಹಿತ ಪತ್ರದ ಪ್ರತಿ ಇತ್ಯಾದಿ ಖೋಟಾ ದಾಖಲೆಗಳನ್ನು ಅವುಗಳ ನೈಜತೆಯನ್ನು ಪರಿಶೀಲಿಸದೇ, ಅವುಗಳ ಆಧಾರದ ಮೇಲೆ ರೂ.8,67,535/– ಗಳನ್ನು ನೀಡುವುದರ ಮೂಲಕ ತಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ ಎಸಗಿ ತೀವ್ರತರವಾದ ದುರ್ನಡತೆ ಎಸಗಿರುವುದು ಸ್ಪಷ್ಟವಾಗಿ ಕಂಡುಬಂದಿದ್ದು. ಹಾಗೂ ಅವರು ಈಗಾಗಲೇ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಅವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ಹಾಗೂ ಶಾಶ್ವತವಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(a) ರನ್ವಯ ತಡೆಹಿಡಿಯುವ ದಂಡನೆಯನ್ನು ವಿಧಿಸುವಂತೆ ಶಿಫಾರಸ್ಸು ಮಾಡಿದ್ದಾರೆ. ಶ್ರೀ ಜಯರಾಜ್ ಅವರು ಶ್ರೀಮತಿ ರಾಜಮ್ಮ ಅವರು ಹೊಂದಿದ್ದರೆನ್ನಲಾದ ವೆಂಕೋಜಿರಾವ್ ಖಾನೆ ಸ.ನಂ.11ರಲ್ಲಿನ 7 ಎಕರೆ 30 ಗುಂಟೆ ಜಮೀನಿನ ಮಾಲೀಕತ್ವಕ್ಕೆ ಸಂಬಂಧಿಸಿದಂತೆ ಯಾವುದೇ ಮೂಲ ದಾಖಲಾತಿಗಳು ತಮ್ಮ ಕಛೇರಿಯಲ್ಲಿ ಇಲ್ಲದಿದ್ದರೂ ತಮ್ಮ ಸಹಿ ಮಾಡಿ ಕಛೇರಿ ಮೊಹರಿನೊಂದಿಗೆ ಭೂಕಂದಾಯ ಪಾವತಿ ರಸೀತಿ, ಆರ್.ಟಿ.ಸಿ. ಪತ್ರ, ಮುಟೇಷನ್ ರಿಜಿಸ್ಟರ್‌ನ ಪ್ರತಿ ಹಾಗೂ ಕಂದಾಯ ಬಾಕಿ ರಹಿತ ಪತ್ರ ಇತ್ಯಾದಿ ಖೋಟಾ ದಾಖಲೆಗಳನ್ನು ಸೃಷ್ಟಿಸಿ ನಕಲಿ ಮಹಿಳೆಯಾದ ಶ್ರೀಮತಿ ರಾಜಮ್ಮ ಅವರಿಗೆ ನೀಡಿ ಅವರು ಪರಿಹಾರ ಧನವನ್ನು ಪಡೆಯಲು ಸಹಕರಿಸಿರುವ ವರ್ತನೆಯು ತೀವ್ರತರವಾದ ದುರ್ನಡತೆಯಾಗಿರುತ್ತದೆಂದು ತಿಳಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(viii)ರನ್ವಯ ಅವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಉಳಿದ ಶ್ರೀ ಜಯರಾಮ್, ಸಹಾಯಕ ಇಂಜಿನಿಯರ್ ಮತ್ತು ಶ್ರೀ ರಹಮತುಲ್ಲಾ, ಕಂದಾಯ ನಿರೀಕ್ಷಕರು ಅವರುಗಳ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಶಿಫಾರಸ್ಸು ಮಾಡಿದ್ದಾರೆ.

ಶ್ರೀ ಎಸ್.ಶಿವನಾಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಶ್ರೀ ಜಯರಾಜ್, ಕಂದಾಯ ನಿರೀಕ್ಷಕರು ಅವರುಗಳಿಗೆ ಸಂಬಂಧಿಸಿದಂತೆ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ:07.12.2005ರ ನೋಟೀಸಿನೊಡನೆ ಅವರುಗಳಿಗೆ ಒದಗಿಸಿ ಅವುಗಳ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು.

ಶ್ರೀ ಎಸ್.ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಮೇಲೆ (5)ರಲ್ಲಿ ಓದಲಾದ ದಿ:06.01.06ರ ಉತ್ತರ ಸಲ್ಲಿಸಿ, ವಿಚಾರಣಾಧಿಕಾರಿಯವರು ವಿಚಾರಣೆಯ ಸಮಯದಲ್ಲಿ ತಾವು ನೀಡಿರುವ ಲಿಖಿತ ಹೇಳಿಕೆಯನ್ನು ಪರಿಗಣಿಸಿರುವುದಿಲ್ಲ. ವಿಚಾರಣಾ ಸಮಯದಲ್ಲಿ ವಿಚಾರಣಾಧಿಕಾರಿಯವರು Application of mind ಅನ್ನು ಪ್ರಯೋಗಿಸದೆ ಕೇವಲ ಯಾಂತ್ರಿಕವಾಗಿ (mechanical) ವರದಿಯನ್ನು ತಯಾರಿಸಿರುವುದರ ಮೂಲಕ ನಡತೆ ನಿಯಮ 11(22)(ಬಿ) ಮತ್ತು (ಸಿ)ಗಳನ್ನು ಉಲ್ಲಂಘಿಸಿರುತ್ತಾರೆ. ಹಾಗೂ ವಿಚಾರಣಾ ಸಮಯದಲ್ಲಿ ನೀಡಿರುವ ಲಿಖಿತ ಹೇಳಿಕೆಯಲ್ಲಿ ಉಲ್ಲೇಖಿಸಿರುವ ಸರ್ವೋಚ್ಚ ನ್ಯಾಯಾಲಯ, ಉಚ್ಚ ನ್ಯಾಯಾಲಯ ಮತ್ತು ಕೆ.ಎ.ಟಿ.ಯಲ್ಲಿ ಆದ ತೀರ್ಮಾನಗಳನ್ನು ಪರಿಶೀಲಿಸಿರುವುದಿಲ್ಲ. ಉಪ ಲೋಕಾಯುಕ್ತರು ಸಹ ಈ ಯಾವ ಅಂಶಗಳನ್ನು ಪರಿಶೀಲಿಸದೆ Blind ಆಗಿ ದಂಡನೆಯನ್ನು ವಿಧಿಸಲು ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸಿ ಹೀಗಾಗಿ ತಾವು ಈ ಪ್ರಕರಣದಲ್ಲಿ ಯಾವುದೇ ತಪ್ಪನ್ನು ಎಸಗದೇ ಇರುವುದರಿಂದ ವಿಚಾರಣಾ ವರದಿ ಮತ್ತು ಲೋಕಾಯುಕ್ತರ ಶಿಫಾರಸ್ಸನ್ನು ತಿರಸ್ಕರಿಸಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನನ್ವಯ ಶ್ರೀ ಜಯರಾಜ್, ಪ್ರಥಮ ದರ್ಜೆ ಸಹಾಯಕರು ಅವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಹಾಗೂ ಶ್ರೀ ಜಯರಾಮ್, ಸಹಾಯಕ ಇಂಜಿನಿಯರ್ ಮತ್ತು ಶ್ರೀ ರಹಮತುಲ್ಲಾ, ಕಂದಾಯ ನಿರೀಕ್ಷಕರು ಅವರುಗಳನ್ನು ಆರೋಪಮುಕ್ತಗೊಳಿಸಿ ದಿನಾಂಕ:31.10.2006ರಂದು ಆದೇಶ ಹೊರಡಿಸಲಾಗಿದೆ.

ಶ್ರೀ ಎಸ್.ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪದ ಸಂಬಂಧ ಶ್ರೀಮತಿ ರಾಜಮ್ಮ ಅವರಿಗೆ ಪರಿಹಾರ ಬಿಡುಗಡೆ ಮಾಡುವ ಮುನ್ನ ದಾಖಲೆಗಳನ್ನು ಪರಿಶೀಲಿಸಿಲ್ಲವೆಂಬ ಆರೋಪ ಸಾಬೀತಾಗಿರುತ್ತದೆ. ಶ್ರೀಮತಿ ರಾಜಮ್ಮ ಅವರು ಒದಗಿಸಿರುವ ದಾಖಲೆಗಳನ್ನು ಪರಿಶೀಲಿಸಿರುತ್ತಾರೆ. ಆದರೆ, ಅವುಗಳು genuine ದಾಖಲೆಗಳೇ ಎಂಬುದನ್ನು ದೃಢಪಡಿಸುವುದರಲ್ಲಿ ವಿಫಲರಾಗಿರುತ್ತಾರೆ. ಶ್ರೀಮತಿ ರಾಜಮ್ಮ ಅವರು ಒದಗಿಸಿರುವ ಎಲ್ಲಾ ದಾಖಲೆಗಳು ಸೃಷ್ಟಿಸಿದ ಖೋಟಾ ದಾಖಲೆಗಳಾಗಿ, ಈ ಖೋಟಾ ದಾಖಲೆಗಳು genuine ದಾಖಲೆಗಳೇ ಎಂಬುದನ್ನು ದೃಢಪಡಿಸುವಲ್ಲಿ ವಿಫಲರಾಗಿ ಅವರಿಗೆ ದೊಡ್ಡ ಮೊತ್ತದ ಪರಿಹಾರ ಧನ ನೀಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವುದನ್ನು ಸರ್ಕಾರವು ಗಮನಿಸಿದೆ. ಹೀಗಾಗಿ ಅವರ ಉತ್ತರದಲ್ಲಿ ಪರಿಗಣಿಸಬೇಕಾದ ಅಂಶಗಳು ಕಂಡು ಬಂದಿರುವುದಿಲ್ಲ. ಆದರೂ ಅವರ ವಿರುದ್ಧ ಮಾಡಲಾದ ಆರೋಪದ ತೀವ್ರತೆಯನ್ನು ಪರಿಶೀಲಿಸಿದಲ್ಲಿ ಅವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ಹಾಗೂ ಶಾಶ್ವತವಾಗಿ ಉಪ ಲೋಕಾಯುಕ್ತರ ಶಿಫಾರಸ್ಸಿನಂತೆ ತಡೆಹಿಡಿದಲ್ಲಿ ಈ ದಂಡನೆಯು ಅಸಮ ಪ್ರಮಾಣದಲ್ಲಿರುವುದನ್ನು ಮನಗಂಡು ಅವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ಹಾಗೂ ಶಾಶ್ವತವಾಗಿ ತಡೆಹಿಡಿಯುವ ದಂಡನೆಯ ಬದಲಾಗಿ ಅವರ ಮಾಸಿಕ ನಿವೃತ್ತಿ ವೇತನದ ಶೇಕಡ 20ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಮೇಲೆ (6)ರಲ್ಲಿ ಓದಲಾದ ದಿನಾಂಕ:30.10.2006ರ ಸರ್ಕಾರಿ ಪತ್ರದಲ್ಲಿ ಕೋರಲಾಗಿತ್ತು. ಅದಕ್ಕೆ ಆಯೋಗವು ಮೇಲೆ (7)ರಲ್ಲಿ ಓದಲಾದ ದಿನಾಂಕ:23.02.2007ರಂದು ನೀಡಿರುವ ತನ್ನ ಸಹಮತಿಯಲ್ಲಿ ಶ್ರೀ ಎಸ್.ಶಿವಾನಂದಶರ್ಮ,

ನಿವೃತ್ತ ಕೆಎಎಸ್ ಅಧಿಕಾರಿ ಅವರಿಂದ ರೂ.8,67,535/–ನ್ನು ಶೇಕಡ 8ರಂತೆ ಬಡ್ಡಿ ಸಮೇತ ವಸೂಲಿ ಮಾಡುವ ನಿಬಂಧನೆಗೊಳಪಟ್ಟಂತೆ ಅವರ ಮಾಸಿಕ ವಿಶ್ರಾಂತಿ ವೇತನದ ಶೇಕಡ 20 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸಹಮತಿ ನೀಡಿರುತ್ತದೆ. ಆಯೋಗದ ಸಹಮತಿಯನ್ನು ಪರಿಶೀಲಿಸಿದ ಸರ್ಕಾರವು ಸದರಿ ನಿವೃತ್ತ ಅಧಿಕಾರಿಯವರಿಂದ ರೂ.8,67,535/–ಗಳನ್ನು ಶೇಕಡ 8ರ ಬಡ್ಡಿಯೊಂದಿಗೆ ವಸೂಲಿ ಮಾಡುವುದನ್ನು ಕೈಬಿಟ್ಟು ಅವರ ಮಾಸಿಕ ವಿಶ್ರಾಂತಿ ವೇತನದ ಶೇಕಡ 20 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 60 ಎಸ್‌ಇಎನ್ 92, ಬೆಂಗಳೂರು, ದಿನಾಂಕ:4ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರ ಮಾಸಿಕ ವಿಶ್ರಾಂತಿ ವೇತನದ ಶೇಕಡ 20ರಷ್ಟು ಮೊತ್ತವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಶಾಶ್ವತವಾಗಿ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1293 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ (ನಿಧನ), ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ ಅವರ ವಿರುದ್ಧ ಇಲಾಖಾ ವಿಚಾರಣೆ–ಮುಕ್ತಾಯಗೊಳಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 120 ಎಸ್‌ಇಎನ್ 03 ದಿನಾಂಕ:19.11.2004.
2) ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಚಾಮರಾಜನಗರ ಅವರ ಪತ್ರ ಸಂಖ್ಯೆ:ಸಿಬ್ಬಂದಿ(2)/ ಸಿಆರ್/01/03–04 ದಿನಾಂಕ:19.04.2007.

**ಪ್ರಸ್ತಾವನೆ:**

ಶ್ರೀ ಮಹಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ (1)ರಲ್ಲಿ ಓದಲಾದ ದಿ:19.11.04ರ ಸರ್ಕಾರಿ ಆದೇಶದಲ್ಲಿ ಶ್ರೀ ಪಿ.ಸಿ.ದಯಾಪರಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ, ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಮಂಡನಾಧಿಕಾರಿಯಾದ ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು ಅವರು ಮೇಲೆ (2)ರಲ್ಲಿ ಓದಲಾದ ದಿ:19.04.07 ರಂದು ಪತ್ರ ಬರೆದು ಆರೋಪಿತರಲ್ಲೊಬ್ಬರಾದ ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ ಅವರು ಸೇವೆಯಲ್ಲಿರುವಾಗಲೇ ದಿ:26.01.07ರಂದು ನಿಧನ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ.

ಶ್ರೀ ಪಿ.ಸಿ.ಶರ್ಮ ಅವರಿಗೆ ಸಂಬಂಧಿಸಿದಂತೆ ಪ್ರಕರಣವನ್ನು ಪರಿಶೀಲಿಸಲಾಗಿ, ಈ ಪ್ರಕರಣವು ವಿಚಾರಣಾಧಿಕಾರಿಯವರ ಬಳಿಯಿರುವಾಗಲೇ ಇವರು ದಿ:26.01.07ರಂದು ನಿಧನ ಹೊಂದಿದ್ದರಿಂದ ಹಾಗೂ ಇವರ ವಿರುದ್ಧ ಈ ಇಲಾಖೆಯಲ್ಲಿ ಇನ್ನಾವುದೇ ಪ್ರಕರಣಗಳು ಬಾಕಿ ಇರುವುದಿಲ್ಲವಾದ್ದರಿಂದ ಇವರ ಮಟ್ಟಿಗೆ ಪ್ರಕರಣವನ್ನು ಮುಕ್ತಾಯ ಮಾಡಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 120 ಎಸ್‌ಇಎನ್ 2003, ಬೆಂಗಳೂರು ದಿನಾಂಕ: 13ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ (ನಿಧನ), ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಅವರಿಗೆ ಸಂಬಂಧಿಸಿದಂತೆ ಮಾತ್ರ ಪ್ರಕರಣವನ್ನು ಮುಕ್ತಾಯಗೊಳಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1319 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಎ.ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಚನ್ನವೀರೇಗೌಡ, ಹಿಂದಿನ ಸಮಾಜ ಕಲ್ಯಾಣ ವಿಸ್ತರಣಾಧಿಕಾರಿ ಹಾಗೂ ಶ್ರೀ ಶಿವಯ್ಯ, ಶಿರಸ್ತೇದಾರ್, ತಾಲ್ಲೂಕು ಪಂಚಾಯತ್, ಕೆ.ಆರ್.ನಗರ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 107 ಎಸ್‌ಇಎನ್ 96 ದಿನಾಂಕ:06.11.2006.
2) ಶ್ರೀ ಚನ್ನವೀರೇಗೌಡ, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಅವರ ದಿನಾಂಕ:17.05.2007ರ ಉತ್ತರ.

**ಪ್ರಸ್ತಾವನೆ:**

ಮೈಸೂರು ಜಿಲ್ಲೆ, ಕೆ.ಆರ್.ನಗರ ತಾಲ್ಲೂಕು ಪಂಚಾಯಿತಿಯಲ್ಲಿ ಶ್ರೀ ಎ.ಮರೀಗೌಡ, ಕೆಎಎಸ್ ಅಧಿಕಾರಿ ಅವರು ಕ್ಷೇತ್ರಾಭಿವೃದ್ಧಿ ಅಧಿಕಾರಿ ಹುದ್ದೆಯಲ್ಲಿ, ಶ್ರೀ ಚನ್ನವೀರೇಗೌಡ ಅವರು ಸಮಾಜ ಕಲ್ಯಾಣ ವಿಸ್ತರಣಾಧಿಕಾರಿ ಹುದ್ದೆಯಲ್ಲಿ ಹಾಗೂ ಶ್ರೀ ಹೆಚ್.ಶಿವಯ್ಯ ಅವರು ಮಿರ್ಲೆ ಗ್ರಾಮದ ಮಂಡಲ ಪಂಚಾಯಿತಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, 1988-89ನೇ ಸಾಲಿನಲ್ಲಿ ಮೈಸೂರು ಜಿಲ್ಲೆ, ಕೆ.ಆರ್.ನಗರ ತಾಲ್ಲೂಕು, ಮಿರ್ಲೆ ಗ್ರಾಮದ ಜೀತ ವಿಮುಕ್ತರ ಪುನರ್ ವಸತಿ ಯೋಜನೆಯಡಿಯಲ್ಲಿ ರಾಸುಗಳು ಹಾಗೂ ದನದ ಆಹಾರಗಳನ್ನು ಖರೀದಿಸುವಲ್ಲಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಸರ್ಕಾರಕ್ಕೆ ಮೋಸ/ನಷ್ಟ ಉಂಟು ಮಾಡಿದ ಆರೋಪಗಳಿಗಾಗಿ ಅವರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:06.11.06ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಶ್ರೀ ಚನ್ನವೀರೇಗೌಡ ಅವರು ಮಾತ್ರ ಲಿಖಿತ ಉತ್ತರ ಸಲ್ಲಿಸಿರುತ್ತಾರೆ. ಉಳಿದ ಆರೋಪಿತರುಗಳಾದ ಶ್ರೀ ಎ.ಮರೀಗೌಡ ಮತ್ತು ಶ್ರೀ ಹೆಚ್.ಶಿವಯ್ಯ ಅವರುಗಳು ಇದುವರೆವಿಗೂ ತಮ್ಮಗಳ ಲಿಖಿತ ಉತ್ತರಗಳನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 107 ಎಸ್ಇಎನ್ 96, ಬೆಂಗಳೂರು ದಿನಾಂಕ: 16ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ರೊಡನೆ ಓದಿಕೊಂಡಂತೆ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಎ.ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಚನ್ನವೀರೇಗೌಡ ಹಾಗೂ ಶ್ರೀ ಶಿವಯ್ಯ ಅವರುಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತಂತೆ ವಿಚಾರಣೆ ಮಾಡಲು ಪ್ರಾದೇಶಿಕ ಆಯುಕ್ತರು, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಕೆ.ಆರ್.ನಗರ, ಮೈಸೂರು ಜಿಲ್ಲೆ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1346

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಮಹಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ಬೇರೊಬ್ಬ ವಿಚಾರಣಾಧಿಕಾರಿಯವರನ್ನು ನೇಮಿಸುವ ಬಗ್ಗೆ-ಪರಿಷ್ಕೃತ ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 120 ಎಸ್ಇಎನ್ 03 ದಿನಾಂಕ:19.11.2004.

2) ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಚಾಮರಾಜನಗರ ಜಿಲ್ಲೆ ಹಾಗೂ ಮಂಡನಾಧಿಕಾರಿ ಅವರ ಪತ್ರ ಸಂಖ್ಯೆ:ಸಿಬ್ಬಂದಿ(2)/ಸಿಆರ್/01/03-04 ದಿನಾಂಕ:19.04.2007.

**ಪ್ರಸ್ತಾವನೆ:**

ಶ್ರೀ ಮಹಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ ಅವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ:19.11.04ರ ಸರ್ಕಾರಿ ಆದೇಶದಲ್ಲಿ ಶ್ರೀ ಪಿ.ಸಿ.ದಯಾಪರಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಚಾಮರಾಜನಗರ ಜಿಲ್ಲೆ ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿರುತ್ತದೆ. ಮಂಡನಾಧಿಕಾರಿಯಾದ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಚಾಮರಾಜನಗರ ಜಿಲ್ಲೆ ಅವರು ಮೇಲೆ (2)ರಲ್ಲಿ ಓದಲಾದ ದಿ:19.04.07ರಂದು ಪತ್ರ ಬರೆದು ಈ ಪ್ರಕರಣದ ಆರೋಪಿತರಲೊಬ್ಬರಾದ ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ ಅವರು ದಿ:26.01.07ರಂದು ನಿಧನ ಹೊಂದಿದ್ದು, ಸರ್ಕಾರವು ವಿಚಾರಣೆಗೆ ವಹಿಸಿ ಸುಮಾರು 2 ವರ್ಷಕ್ಕೂ ಮೇಲ್ಪಟ್ಟಾಗಿದ್ದರೂ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ಪ್ರಾರಂಭಿಸಿರುವುದಿಲ್ಲ. ವಿಚಾರಣಾಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡುವಂತೆ ತಪ್ಪಿದಲ್ಲಿ ಬದಲಿ ವಿಚಾರಣಾಧಿಕಾರಿಗಳನ್ನು ನೇಮಿಸಲು ಕ್ರಮ ವಹಿಸುವಂತೆ ಕೋರಿರುತ್ತಾರೆ. ಮಂಡನಾಧಿಕಾರಿಯವರ ಪತ್ರವನ್ನು ಪರಿಶೀಲಿಸಿ ಪರಿಗಣಿಸಿದ ಸರ್ಕಾರವು ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ ಅವರು ಸೇವೆಯಲ್ಲಿರುವಾಗಲೇ ದಿ:26.01.07ರಂದು ನಿಧನ ಹೊಂದಿರುವುದರಿಂದ ಅವರಿಗೆ ಸಂಬಂಧಿಸಿದಂತೆ ಪ್ರಕರಣವನ್ನು ಮುಕ್ತಾಯಗೊಳಿಸಲಾಗಿದೆ. ಉಳಿದ ಆರೋಪಿತರಾದ ಶ್ರೀ ಮಹಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ಮಾಡಲು ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 120 ಎಸ್‌ಇಎನ್ 2003, ಬೆಂಗಳೂರು ದಿನಾಂಕ: 13ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ನ್ನು ಓದಿಕೊಂಡಂತೆ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಹಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ ಅವರುಗಳ ಮೇಲೆ ಹೊರಿಸಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಸಮಸಂಖ್ಯೆಯ ದಿ:19.11.04ರ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿದ್ದ ಶ್ರೀ ಪಿ.ಸಿ.ದಯಾಪರಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರ ಬದಲಿಗೆ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಅವರನ್ನು ಶ್ರೀ ಮಹಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಇವರ ವಿರುದ್ಧ ಮಾತ್ರ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಅವರೇ ಮಂಡನಾಧಿಕಾರಿಯನ್ನಾಗಿ ಮುಂದುವರಿಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1354 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

## ಆರ್ಥಿಕ ಸಚಿವಾಲಯ

**ವಿಷಯ:** ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ವಿತರಿಸಲು ರಚಿಸಲಾದ "ಹೈಪವರ್ ಕಮಿಟಿ"ಯ ಕ್ರ.ಸಂ.5 ರಲ್ಲಿನ ಸದಸ್ಯರನ್ನು ಬದಲಾವಣೆ ಮಾಡಿರುವ ಬಗ್ಗೆ ಆದೇಶ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 09 ಇಎಫ್‌ಎಲ್ 2007, ದಿನಾಂಕ: 16.03.2007.

2) ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಇ 15 ಆರ್‌ಎಸ್‌ಎ 2007, ದಿನಾಂಕ: 01.06.2007.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 16.03.2007 ರಲ್ಲಿ ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ವಿತರಿಸಲು ಹಲವು ತಜ್ಞ ಸದಸ್ಯರನ್ನೊಳಗೊಂಡಂತೆ "ಹೈಪವರ್ ಕಮಿಟಿ" ಯನ್ನು ದಿನಾಂಕ: 16.03.2007 ರಿಂದ ಒಂದು ವರ್ಷದ ಅವಧಿಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ (2)ರ ಅಬಕಾರಿ ಆಯುಕ್ತರ ಪತ್ರ ದಿನಾಂಕ: 01.06.2007 ರಲ್ಲಿ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 9 ಇಎಫ್‌ಎಲ್ 2007 ದಿನಾಂಕ: 16.03.2007ರ ಕ್ರ.ಸಂ.5 ರಲ್ಲಿ ಪ್ರಾಂಶುಪಾಲರು, ಪಿ.ಇ.ಕಾಲೇಜ್ ಆಫ್ ಇಂಜಿನಿಯರಿಂಗ್, ಮಂಗಳೂರು ಎಂದು ನಮೂದಿಸಿದ್ದು, ಆಗ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದ ಡಾ: ಎಂ.ಎಸ್.ಕಾಮತ್, ಕೆಮಿಕಲ್ ಇಂಜಿನಿಯರ್, ರವರು ಸದರಿ ಹುದ್ದೆಯನ್ನು ಬಿಟ್ಟು ಪ್ರಸ್ತುತ ಮಂಗಳೂರಿನ ಸೂರತ್ಕಲ್‌ನಲ್ಲಿರುವ N.I.T-K, ಕಾಲೇಜಿನ ಕೆಮಿಕಲ್ ಇಂಜಿನಿಯರಿಂಗ್ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇವರು ರಾಸಾಯನಿಕ ಇಂಜಿನಿಯರಿಂಗ್‌ನಲ್ಲಿ ಪಾಂಡಿತ್ಯ ಹೊಂದಿರುವುದರಿಂದ ಇವರ ಹಾಜರಾತಿಯು ಉನ್ನತ ಮಟ್ಟದ ಸಮಿತಿಯಲ್ಲಿ ಅಗತ್ಯವಿರುವುದರಿಂದ ಇವರನ್ನೆ ಸದಸ್ಯರನ್ನಾಗಿ ಮುಂದುವರಿಸಲು ಕೋರಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 09 ಇಎಫ್‌ಎಲ್ 2007, ಬೆಂಗಳೂರು, ದಿನಾಂಕ: 2ನೇ ಜುಲೈ 2007**

ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 09 ಇಎಫ್‌ಎಲ್ 2007, ದಿನಾಂಕ: 16.03.2007 ರಲ್ಲಿ ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ವಿತರಿಸಲು ರಚಿಸಲಾದ ಉನ್ನತ ಮಟ್ಟದ ಸಮಿತಿಯ ಕ್ರ.ಸಂ.5 ರಲ್ಲಿ "ಪ್ರಾಂಶುಪಾಲರು ಪಿ.ಇ.ಕಾಲೇಜ್ ಆಫ್ ಇಂಜಿನಿಯರಿಂಗ್, ಮಂಗಳೂರು ಸದಸ್ಯರು" ಇವರ ಬದಲಾಗಿ "ಡಾ.ಎಂ.ಎಸ್.ಕಾಮತ್ ಪ್ರೊಫೇಸರ್ ಆಫ್ ಕೆಮಿಕಲ್ ಇಂಜಿನಿಯರಿಂಗ್ N.I.T-K, ಸೂರತ್ಕಲ್, ಮಂಗಳೂರು" ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕೋದಂಡರಾಮ ಗೌಡ**

ಪಿ.ಆರ್. 1300 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಅಬಕಾರಿ).

## PLANNING & STATISTICS SECRETARIAT

**Subject:** Setting up of a Steering Committee for preparation of a Comprehensive State Plan for Agriculture Development.

**Read:** 1) Resolution of 53rd National Development Council (NDC) meeting on the Agricultural Strategy for the 11th Plan held at New Delhi on 29.05.2007.

2) D.O. Letter dated: 12th June 2007 from the Hon'ble Prime Minister addressed to the Chief Minister of Karnataka.

**PREAMBLE:**

The NDC in its 53rd Meeting held on 29th May 2007 has reaffirmed its commitment to achieve the goal of an annual growth rate of 4% in agriculture sector.To achieve this goal State Govt. has to take action on the following:

a) Formulating District Comprehensive Agricultural Plans utilizing resources from all available schemes (to include livestock, fishing & be integrated with Minor Irrigation projects, rural development works & other schemes for water harvesting)

b) Prepare a State Agricultural Plan based on district Plans aimed at achieving the State's agricultural growth objective.

c) Special efforts to expedite completion of Accelerated Irrigation Benefits Programme (AIBP) projects.

d) Priority to Seed production, reduce yield gaps, Public Private Partnership (PPP), between State, State Agricultural Universities, public sector for production of seeds of varities suitable for each agro climatic region.

e) Revamp and rejuvenate agriculture extension systems.

f) Expedite Memorandum of Understanding on implementation of Vaidyanathan Committee Report (Co-operative credit).

g) Modernise agriculture marketing-notify APMC Rules.

h) Each State will ensure that the base line share of agriculture in its total State Plan expenditure is atleast maintained, and upon its doing so, itwill be able to access the new Additional Central Assistance (ACA) to meet the Central contribution to the expenditure on the agricultural plan beyond the base line.

Government of India under the newly announced scheme will consider proposal from the State Government only against the backdrop of a State Agricultural Perspective Plan based on district plans, incorporating the priorities which were identified in the NDC Sub-committee report and spelt out in the resolution.

To ensure this task is completed in a time bound manner it is proposed to set up a Steering Committee under the chairmanship of ACS & Development Commissioner with concerned Principal Secretary/Secretaries and Heads of Departments as members.

The proposal has been endorsed by the Planning Minister and Chief Minister.

The State Govt., after examining the recommendations of NDC is pleased to issue the following order.

**GOVERNMENT ORDER NO: PD 15 PMM 2007, BANGALORE, DATED: 2nd JULY 2007**

In the circumstances explained in the Preamble the Govt., of Karnataka accords approval for setting up of a Steering Committee under the chairmanship of ACS & Development Commissioner. The modalities of structuring the perspective plan, a review of the existing schemes, the case for amalgamation of these with new proposals etc, will have to be taken up by the Steering Committee.

The Composition of the Steering Committee is as follows:

| | | |
|---|---|---|
| a) | ACS & Development Commissioner | Chairman |
| b) | Principal Secretaries/Secretaries/HOD's of Agriculture, Horticulture, Co-operation, Animal Husbandry, Rural Development & Panchayat Raj, Planning, Finance, Water Resources and Minor Irrigation. | Member |
| c) | Principal Secretary, Agriculture | Member-Convener |

The terms of Reference of the Steering Committee would be as follows:

a) To review status of availability of Comprehensive District Level Plans on Agriculture and allied areas and suggest how these can be updated/revised in terms of contents in an integrated manner.

b) To monitor the preparation of District Level Plans under the aegis expert agencies in the field of Agriculture/Allied sectors so that the strategies, programmes, investments within specified time frames are incorporated in a uniform format.

c) Based on the inputs emerging for the District Level Plans, to supervise the preparation of a consolidated and integrated Perspective Plan for the State which may be drawn up for all sectoral components with concomitant investments required over a ten year time frame and financing options. The Committee may avail the expert advice of a strategic consultant.

The State Planning Board shall, at an appropriate stage in the preparation process critique the perspective plan & provide its inputs before finalisation.

Time frame is as follows:

| | | (In weeks) |
|---|---|---|
| 1. | Constitution of Task Force | 1 Week |
| 2. | Initial Discussion on Methodology | 2 Weeks |
| 3. | Appointment of consultants by Task Force | 3-5 Weeks |
| 4. | Preparation of District/State Plan | 6-8 Weeks |
| 5. | Presentation of Draft Plan to State Planning Board | 2 Weeks |
| 6. | Finalization of Plan | 4 Weeks |
| | **Total** | **22 Weeks** |

By Order and in the name of the Governor of Karnataka,

**B.S. SHIVASWAMY**

Under Secretary to Government - 1&2(I/C),

Planning & Statistics Department.

P.R. 1301

**CIRCULAR**

**No. PD 15 YOGASE 2007, BANGALORE, DATED: 5th JULY 2007**

**Subject:** Visit of Parliamentary Committee on MPLADS - follow up action there on.

In the Parliamentary Committee Meeting headed by the Chairman, Parliamentary Committee of Loksabha on 20.06.2007 with the Chief Secretary, Government of Karnataka, it has been suggested that MPLAD Scheme should be reviewed by the Regional Commissioners and the District in charge Secretaries to Government on a regular basis.

Therefore, the Regional Commissioners while conducting regular reviews of development programmes in the region should also review the physical & financial progress of MPLAD Scheme along with DCs of the region as per the MPLAD guidelines.

The MPLAD Scheme should be a regular agenda item in the meetings to be conducted by Regional Commissioners.

Similarly, the District in charge Secretaries to Government during their periodic tours to districts should also monitor & review the financial & physical progress of MPLAD Scheme on a regular basis as per MPLAD guidelines.

The copies of the Agenda Notes/Proceedings of these review meetings by Regional Commissioners & District in charge Secretaries should be sent to Director, ADB Division of the Planning Department on a regular basis.

**LAKSHMI VENKATACHALAM**

Principal Secretary to Government,

Planning & Statistics Department.

P.R. 1302

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ: ಡಿಪಿಎಆರ್ 88 ಎಸ್ಎಎಸ್ 2007, ದಿನಾಂಕ: 31.5.2007.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ಸುಧಾಕರರಾವ್, ಐಎಎಸ್, ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ, ಮುಖ್ಯಮಂತ್ರಿಯವರ ಸಚಿವಾಲಯ ಇವರನ್ನು ಐ.ಎ.ಎಸ್.ನ ಸೂಪರ್ ಟೈಂ ಸ್ಕೇಲ್ ವೃಂದಕ್ಕಿಂತ ಮೇಲ್ಪಟ್ಟದ ವೇತನ ಶ್ರೇಣಿ ರೂ.26,000.00 (ನಿಗದಿತ) ಅನ್ನು ಹೊಂದಿರುವ ಅಪರ ಮುಖ್ಯ ಕಾರ್ಯದರ್ಶಿ ಹುದ್ದೆಗೆ ದಿನಾಂಕ: 1.6.2007 ರಿಂದ ಜಾರಿಗೆ ಬರುವಂತೆ ಸ್ಥಾನಪನ್ನ ಬಡ್ತಿ ನೀಡಿ ಅವರನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ ಹುದ್ದೆಯಲ್ಲಿ ಮುಂದುವರೆಸಲಾಗಿದೆ. ಆದ್ದರಿಂದ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಪ್ರಸ್ತುತ ಅಸ್ಥಿತ್ವದಲ್ಲಿರುವ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಮುಖ್ಯ ಮಂತ್ರಿಯವರ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 2007, ಬೆಂಗಳೂರು, ದಿನಾಂಕ: 11ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮುಖ್ಯಮಂತ್ರಿಯವರ ಸಚಿವಾಲಯದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 1.6.2007 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿದೆ.

ಸದರಿ ಆಪ್ತ ಶಾಖೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ಹುದ್ದೆಗಳ ಬದಲು ಈ ಹುದ್ದೆಗಳ ಎದುರು ನಮೂದಿಸಿರುವ ಹುದ್ದೆಗಳು ಸಹ ಮುಂದಿನ ಆದೇಶದವರೆಗೆ ಚಾಲ್ತಿಯಲ್ಲಿರುತ್ತದೆ.

| ಪ್ರಸ್ತುತ ಚಾಲ್ತಿಯಲ್ಲಿರುವ ಹುದ್ದೆಗಳು ಹಾಗೂ ಸಂಖ್ಯೆ | ಹುದ್ದೆಗಳ ಸಂಖ್ಯೆ | ಅ.ಮು.ಕಾ.ಯವರು ಕಾರ್ಯವರದಿ ಮಾಡಿಕೊಂಡ ದಿನಾಂಕ: 1.6.2007 ರಿಂದ ಚಾಲ್ತಿಯಲ್ಲಿರುವ ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|---|
| ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2 ಪತ್ರಾಂಕಿತ ಆಪ್ತ ಸಹಾಯಕರು | 01 | ಆಪ್ತ ಕಾರ್ಯದರ್ಶಿ ಕರ್ನಾಟಕ ಸರ್ಕಾರ ಸಚಿವಾಲಯದ ಉ.ಕಾ. : ಅ.ಕಾ. : ಆ.ಕಾ.ಗ್ರೇಡ್–2 ಅಥವಾ ಕೆ.ಎ.ಎಸ್. ಹಿರಿಯ ಶ್ರೇಣಿ : ಕಿರಿಯ ಶ್ರೇಣಿ | 01 |
| ಪತ್ರಾಂಕಿತ ಆಪ್ತ ಸಹಾಯಕ ಹಿರಿಯ ಶೀಘ್ರಲಿಪಿಗಾರ | 01 | ಪತ್ರಾಂಕಿತ ಆಪ್ತ ಸಹಾಯಕರು : ಹಿರಿಯ ಶೀಘ್ರಲಿಪಿಗಾರ | 03 |
| ಶಾಖಾಧಿಕಾರಿ : ಹಿರಿಯ ಸಹಾಯಕ | 01 | ಶಾಖಾಧಿಕಾರಿ : ಹಿರಿಯ ಸಹಾಯಕ | 01 |
| ಕಿರಿಯ ಸಹಾಯಕ : ಸಹಾಯಕ | 01 | ಕಿರಿಯ ಸಹಾಯಕ : ಸಹಾಯಕ | 03 |
| – | – | ಹಿರಿಯ ಬೆರಳಚ್ಚುಗಾರ | 01 |
| ವಾಹನ ಚಾಲಕ | 01 | ವಾಹನ ಚಾಲಕ | 01 |
| ದಲಾಯತ್ | 02 | ದಲಾಯತ್ | 04 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1229 ವೆಚ್ಚ–5/2007, ದಿನಾಂಕ: 4.7.2007 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಪಿ.ಆರ್. 1303 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ವಿಷಯ:** ಶ್ರೀ ವೈ.ಎಂ.ರಾಮಚಂದ್ರಮೂರ್ತಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಡಿ.ನಾಗರಾಜ್, ಶಿರಸ್ತೇದಾರ್ ಮತ್ತು ಶ್ರೀ ಆರ್.ಕುಮಾರ್, ದ್ವಿತೀಯ ದರ್ಜೆ ಸಹಾಯಕರು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ಆರೋಪ ಮುಕ್ತರನ್ನಾಗಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ: ಸಿಆಸುಇ 234 ಎಸ್‌ಇಎನ್ 06, ದಿನಾಂಕ: 22.01.2007.
2) ಶ್ರೀ ವೈ.ಎಂ.ರಾಮಚಂದ್ರಮೂರ್ತಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿನಾಂಕ: 16.04.2007.
3) ಶ್ರೀ ಡಿ.ನಾಗರಾಜ್, ಶಿರಸ್ತೇದಾರ್ ಅವರ ಉತ್ತರ ದಿನಾಂಕ: 22.03.2007.
4) ಶ್ರೀ ಆರ್.ಕುಮಾರ್, ದ್ವಿತೀಯ ದರ್ಜೆ ಸಹಾಯಕರು ಅವರ ಉತ್ತರ ದಿನಾಂಕ: 29.03.2007.

**ಪ್ರಸ್ತಾವನೆ:**

ಬೆಂಗಳೂರು ದಕ್ಷಿಣ ಉಪ ವಿಭಾಗಾಧಿಕಾರಿಗಳ ಕಛೇರಿಯಲ್ಲಿ ಶ್ರೀ ವೈ.ಎಂ.ರಾಮಚಂದ್ರಮೂರ್ತಿ, ಕೆ.ಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಉಪ ವಿಭಾಗಾಧಿಕಾರಿಯಾಗಿ, ಶ್ರೀ ಡಿ.ನಾಗರಾಜ್, ಶಿರಸ್ತೇದಾರ್ ಅವರು ವ್ಯವಸ್ಥಾಪಕರಾಗಿ ಮತ್ತು ಶ್ರೀ ಆರ್.ಕುಮಾರ್, ದ್ವಿತೀಯ ದರ್ಜೆ ಸಹಾಯಕರು ಅವರು ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಬೆಂಗಳೂರು ದಕ್ಷಿಣ ತಾಲ್ಲೂಕು, ಚಿಕ್ಕಲಸಂದ್ರ ಗ್ರಾಮದ ಸ.ನಂ.76 ರಲ್ಲಿನ 12.26 ಎಕರೆ ಮತ್ತು ಸ.ನಂ.83 ರಲ್ಲಿನ 6.23 ಎಕರೆ ಸರ್ಕಾರಿ ಕೆರೆಯಂಗಳ ಜಮೀನಿಗೆ ಸಂಬಂಧಪಟ್ಟ ಅಕ್ರಮ ಹಕ್ಕು ದಾಖಲೆಗಳನ್ನು ರದ್ದುಪಡಿಸಿ ದಿನಾಂಕ: 20.03.97ರ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಂತೆ ಉಪ ವಿಭಾಗಾಧಿಕಾರಿಗಳಿಗೆ remand ಆಗಿ ಬಂದ ಪ್ರಕರಣಗಳಲ್ಲಿ 5 ವರ್ಷ ವಿಳಂಬ ಮಾಡಿ ವಿಶೇಷ ಜಿಲ್ಲಾಧಿಕಾರಿಗಳ ನ್ಯಾಯಾಲಯಕ್ಕೆ ಭೂ ಕಂದಾಯ ಕಾಯ್ದೆ ಸೆಕ್ಷನ್ 136(3) ರಡಿಯಲ್ಲಿ ಪ್ರಕರಣ ದಾಖಲಿಸಿಕೊಳ್ಳಲು ವರದಿ ನೀಡಿ ಮತ್ತು ಕೆಲವು ಪ್ರಕರಣಗಳಲ್ಲಿ ದಾಖಲೆಗಳ ಪರಿಶೀಲನೆಗಾಗಿ Forensic Labಗೆ ಅಭಿಪ್ರಾಯಕ್ಕೆ ಕಳುಹಿಸಲು ಅತೀವ ವಿಳಂಬ ಮಾಡಿ ಅಕ್ರಮವಾಗಿ ಸರ್ಕಾರಿ ಕೆರೆಯಂಗಳ ಖಾಸಗಿಯವರ ಪಾಲಾಗಲು ಸಹಕರಿಸಿರುವ ಆರೋಪದ ಸಂಬಂಧ ಮೇಲ್ಕಂಡ ಅಧಿಕಾರಿ/ನೌಕರರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 22.01.2007ರ ನೋಟೀಸ್ ಹಾಗೂ ದೋಷಾರೋಪಣೆಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)

ನಿಯಮಾವಳಿ 1957ರ ನಿಯಮ 11 ರನ್ವಯ ಜಾರಿ ಮಾಡುವುದರ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಶ್ರೀ ವೈ.ಎಂ. ರಾಮಚಂದ್ರಮೂರ್ತಿರವರು ಉತ್ತರವನ್ನು ಸಲ್ಲಿಸುತ್ತಾ, ಸದರಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 29726/94 ಚಾಲ್ತಿಯಲ್ಲಿದ್ದು, ಸ.ನಂ.76 ಮತ್ತು 83ಕ್ಕೆ ಸಂಬಂಧಿಸಿದ ಎಲ್ಲಾ ಮೂಲ ಕಡತಗಳನ್ನು ಉಚ್ಚ ನ್ಯಾಯಾಲಯದ ಮುಂದೆ ಮಂಡಿಸಿದ್ದುದರಿಂದ remand ಆಗಿ ಬಂದ ಪ್ರಕರಣಗಳಲ್ಲಿ ಕ್ರಮ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲವೆಂದು ಹಾಗೂ ಗೇಣಿ ಹಕ್ಕಿನ ಬಗ್ಗೆ ಉಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವಾಗ ಖಾತೆಗೆ ಸಂಬಂಧಿಸಿದಂತೆ ಯಾವುದೇ ಆದೇಶವನ್ನು ರೆವೆನ್ಯೂ ಅಧಿಕಾರಿಗಳು ಆದೇಶ ಮಾಡುವಂತಿಲ್ಲವೆಂದು ಹಲವಾರು ಆದೇಶಗಳಲ್ಲಿ ಉಚ್ಚ ನ್ಯಾಯಾಲಯವು ಆದೇಶಿಸಿರುತ್ತದೆಯೆಂದು ಈ ಕಾರಣದಿಂದ ತಾವು ಯಾವುದೇ ನಿರ್ಣಯ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲವೆಂದು ತಿಳಿಸಿರುತ್ತಾರೆ. ನಂತರ ಈ ಪ್ರಕರಣದಲ್ಲಿ ಮುಂದುವರಿಯಲು ಭೂ ಕಂದಾಯ ಕಾಯ್ದೆ ಕಲಂ 136(2) ರನ್ವಯ ನೋಟೀಸ್ ನೀಡಿ ಸ್ವಯಂ ಪ್ರೇರಣೆಯಿಂದ ವಿಚಾರಣೆ ನಡೆಸಬಹುದೇ ಎಂಬ ವಿಚಾರವನ್ನು ವಿಶೇಷ ಜಿಲ್ಲಾಧಿಕಾರಿಯವರೇ ತೀರ್ಮಾನಿಸಬೇಕೆಂಬ ಉಚ್ಚ ನ್ಯಾಯಾಲಯದ ಆದೇಶದನ್ವಯ ಭೂ ಕಂದಾಯ ಕಾಯ್ದೆ ಕಲಂ 136(3) ರನ್ವಯ ಕ್ರಮ ಕೈಗೊಳ್ಳಲು ವಿಶೇಷ ಜಿಲ್ಲಾಧಿಕಾರಿಗಳಿಗೆ ವರ್ಗಾಯಿಸಿರುತ್ತೇನೆಂದು ತಿಳಿಸಿ, ಇದರಲ್ಲಿ ಯಾವುದೇ ಲೋಪದೋಷಗಳು ಇಲ್ಲವೆಂದು ತಿಳಿಸಿರುತ್ತಾರೆ ಹಾಗೂ ಮೂಲ ದಾಖಲೆಗಳು ಲಭ್ಯವಿಲ್ಲದ ಕಾರಣ ಈ ಪ್ರಕರಣದಲ್ಲಿ ವಿಶೇಷ ಜಿಲ್ಲಾಧಿಕಾರಿಗಳು ಸಹ ಈವರೆಗೆ ಅವುಗಳನ್ನು ಇತ್ಯರ್ಥಪಡಿಸಲು ಅವರಿಗೂ ಸಾಧ್ಯವಾಗಿರುವುದಿಲ್ಲವೆಂಬ ಅಂಶವನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಮನವಿ ಮಾಡಿರುತ್ತಾರೆ. ಪ್ರಶ್ನಿತ ಸ.ನಂ.76 ಮತ್ತು 83ಕ್ಕೆ ಸಂಬಂಧಿಸಿದಂತೆ ಎಲ್ಲಾ ಪಹಣಿ ದಾಖಲೆಗಳಲ್ಲಿ ಸರ್ಕಾರಿ ಕೆರೆ ಎಂದು ನಮೂದಾಗಿದ್ದು, ಈವರೆಗೆ ಅದೇ ಪ್ರಕಾರ ಮುಂದುವರಿದಿರುತ್ತದೆ. ಆದ್ದರಿಂದ ಜಮೀನು ಅನ್ಯರ ಪಾಲಾಗಲು ಸಹಕರಿಸಿರುತ್ತೇನೆಂದು ಮಾಡಿರುವ ಆರೋಪ ನಿರಾಧಾರವೆಂದು ತಿಳಿಸಿರುತ್ತಾರೆ. ಆದುದರಿಂದ ತಾನು ಯಾವುದೇ ದುರ್ನಡತೆ ಎಸಗಿಲ್ಲವೆಂದು ಮನವಿ ಮಾಡಿರುತ್ತಾರೆ. ಮುಂದುವರಿದು, ಶ್ರೀ ಡಿ.ನಾಗರಾಜ್ ಮತ್ತು ಶ್ರೀ ಆರ್.ಕುಮಾರ್ ಅವರುಗಳು ಮನವಿಗಳನ್ನು ಸಲ್ಲಿಸುತ್ತಾ, ಸದರಿ ಕಡತಗಳು ಒಂದನೇ ಆರೋಪಿತರ ಬಳಿಯೇ ಇದ್ದವೆಂದು ಭೂ ಕಂದಾಯ ಕಾಯ್ದೆ ಕಲಂ 136(2) ರಡಿ ಈ ಪ್ರಕರಣಗಳು ನ್ಯಾಯಿಕ ಅಧಿಕಾರವುಳ್ಳವುಗಳಾಗಿದ್ದು, ಪ್ರಿಸೀಡಿಂಗ್ ಆಫೀಸರ್ ಜವಾಬ್ದಾರಿಗೆ ಒಳಪಟ್ಟಿರುತ್ತದೆಂದು, Forensic Labಗೆ ಅಭಿಪ್ರಾಯ ಪಡೆಯಲು ಆದೇಶ ಮಾಡಿದ್ದಾಗ್ಯೂ ಕಡತವನ್ನು ಕಛೇರಿಗೆ ಹಿಂತಿರುಗಿಸಿಲ್ಲವೆಂದು ನಡವಳಿ ಮತ್ತು ದಿನಾಂಕಗಳನ್ನು ತಿದ್ದಿರುವುದನ್ನು ಗಮನಿಸಬಹುದೆಂದು, ಇದರಿಂದ ಪ್ರಿಸೀಡಿಂಗ್ ಅಧಿಕಾರಿಯ ಕಾರ್ಯವೈಖರಿಯನ್ನು ಸರ್ಕಾರವೇ ನಿರ್ಧರಿಸಬೇಕೆಂದು ಮನವಿ ಮಾಡಿರುತ್ತಾರೆ.

ಆರೋಪಿತ ಅಧಿಕಾರಿ/ನೌಕರರುಗಳು ಸಲ್ಲಿಸಿರುವ ಮೇಲ್ಕಂಡ ಸಮಜಾಯಿಷಿಗಳನ್ನು ಪರಿಶೀಲಿಸಲಾಗಿ, ಒಂದನೇ ಆರೋಪಿತರಾದ ಶ್ರೀ ವೈ.ಎಂ.ರಾಮಚಂದ್ರಮೂರ್ತಿ ಅವರು ಈ ಪ್ರಕರಣಗಳಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡದೇ ಇರುವುದು ಗೋಚರವಾಗುತ್ತದೆ. ಮೂಲ ಕಡತಗಳು ಲಭ್ಯವಿಲ್ಲವೆಂದು ಭೂ ಕಂದಾಯ ಕಾಯ್ದೆ ಕಲಂ 136(2) ರಡಿ ಪ್ರಕರಣಗಳನ್ನು ವಿಶೇಷ ಜಿಲ್ಲಾಧಿಕಾರಿಗಳೇ ತೀರ್ಮಾನಿಸಬೇಕೆಂಬ ನಿರ್ಧಾರಗಳನ್ನು ದೀರ್ಘಾವಧಿಯ ನಂತರ ತೆಗೆದುಕೊಂಡಿರುವ ಕ್ರಮವೂ ಸಹ ಸರಿಯಾದುದಲ್ಲ. ಇನ್ನಿತರ ಆರೋಪಿತರಾದ ಶ್ರೀ ಡಿ.ನಾಗರಾಜ್ ಮತ್ತು ಶ್ರೀ ಆರ್.ಕುಮಾರ್ ರವರ ಹೇಳಿಕೆಯಲ್ಲಿಯೂ ಸಹ ಯಾವುದೇ ಸಮರ್ಥನೀಯ ಕಾರಣಗಳು ಕಂಡು ಬರುತ್ತಿಲ್ಲ. ಈ ಪ್ರಕರಣಗಳಿಗೆ ಸಂಬಂಧಿಸಿದ ಕಡತಗಳ ಜವಾಬ್ದಾರಿ ಪ್ರಿಸೀಡಿಂಗ್ ಅಧಿಕಾರಿಯದ್ದೇ ಎಂಬುದನ್ನು ಒಪ್ಪಲು ಸಾಧ್ಯವಿಲ್ಲ. ಕಡತಗಳು ಭೌತಿಕವಾಗಿ ಕಛೇರಿಯಲ್ಲಿ ಇರಬೇಕಾಗುತ್ತದೆ ಮತ್ತು ನ್ಯಾಯಾಲಯದಲ್ಲಿ ಪ್ರಕರಣ ಇದ್ದಾಗ ಮಾತ್ರ ಅವುಗಳನ್ನು ಪ್ರಿಸೀಡಿಂಗ್ ಅಧಿಕಾರಿಗೆ ಮಂಡಿಸಬೇಕಾಗುತ್ತದೆ. ಆದ್ದರಿಂದ ಇವರ ಉತ್ತರಗಳಲ್ಲಿ ಕೇವಲ ನುಣುಚಿಕೊಳ್ಳುವ ಪ್ರಯತ್ನ ಮಾಡಿರುವುದು ಕಂಡು ಬರುತ್ತದೆ. ಆದಾಗ್ಯೂ, ಈ ಪ್ರಕರಣವನ್ನು ಒಟ್ಟಾರೆ ಪರಿಶೀಲಿಸಲಾಗಿ, ಇವೆಲ್ಲವೂ ಅರೆ ನ್ಯಾಯಿಕ ನ್ಯಾಯಾಲಯದಲ್ಲಿ ಬಾಕಿ ಇದ್ದ ಪ್ರಕರಣಗಳಾಗಿರುವುದರಿಂದ ಮತ್ತು ಇವುಗಳ ಬಗ್ಗೆ ಈ ಆರೋಪಿತರ ನಂತರ ಮೂರು ವರ್ಷಗಳ ನಂತರವೂ ಯಾವುದೇ ನಿರ್ಧಾರ ಆಗದೇ ಇರುವುದನ್ನು ಗಣನೆಗೆ ತೆಗೆದುಕೊಂಡು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 234 ಎಸ್ಇಎನ್ 2006, ಬೆಂಗಳೂರು, ದಿನಾಂಕ: 10ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ವೈ.ಎಂ.ರಾಮಚಂದ್ರಮೂರ್ತಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಡಿ.ನಾಗರಾಜ್, ಶಿರಸ್ತೇದಾರ್ ಮತ್ತು ಶ್ರೀ ಆರ್.ಕುಮಾರ್, ದ್ವಿತೀಯ ದರ್ಜೆ ಸಹಾಯಕರು ಅವರುಗಳನ್ನು ದಿನಾಂಕ: 22.01.2007ರ ನೋಟೀಸಿನಲ್ಲಿ ಮಾಡಲಾದ ಆರೋಪದಿಂದ ಆರೋಪ ಮುಕ್ತರನ್ನಾಗಿಸುತ್ತದೆ ಹಾಗೂ ಭವಿಷ್ಯದಲ್ಲಿ ಇಂತಹ ಅರೆ ನ್ಯಾಯಿಕ ಪ್ರಕರಣಗಳಲ್ಲಿ ವ್ಯವಹರಿಸುವಾಗ ಜಾಗರೂಕತೆಯಿಂದ ವರ್ತಿಸಲು ಅವರುಗಳಿಗೆ ತೀವ್ರ ಎಚ್ಚರಿಕೆಯನ್ನು ಈ ಮೂಲಕ ನೀಡಲಾಗಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1304

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ:** ಡಾ: ಟಿ.ಎಂ.ಎ. ಪೈ ಶಿಕ್ಷಣ ಕಾಲೇಜಿಗೆ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವಂತೆ ಘೋಷಿಸುವ ಬಗ್ಗೆ.

**ಓದಲಾಗಿದೆ:** 1) ಕಾರ್ಯದರ್ಶಿ, ಡಾ: ಟಿ.ಎಂ.ಎ. ಪೈ ಫೌಂಡೇಷನ್, ಇವರ ಪತ್ರ ಸಂಖ್ಯೆ: ಎಫ್/790/2007, ದಿನಾಂಕ: 14.2.2007.

2) ಸರ್ಕಾರದ ಪ್ರಧಾನ ಕಾರ್ಯದರ್ಶಿ (ಉನ್ನತ ಶಿಕ್ಷಣ) ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 3.7.2007 ರಂದು ನಡೆದ ಸಭಾ ನಡವಳಿ.

**ಪ್ರಸ್ತಾವನೆ:**

ಮೇಲೆ (1)ರ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಟಿ.ಎಂ.ಎ. ಪೈ ಫೌಂಡೇಷನ್, ಸಿಂಡಿಕೇಟ್ ಹೌಸ್, ಮಣಿಪಾಲ, ಇವರು ತಮ್ಮ ಸಂಸ್ಥೆಯ ಟಿ.ಎಂ.ಎ. ಪೈ ಶಿಕ್ಷಣ ಮಹಾವಿದ್ಯಾಲಯಕ್ಕೆ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಓದಲಾದ (2)ರ ದಿನಾಂಕ: 3.7.2007 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ (ಉನ್ನತ ಶಿಕ್ಷಣ), ಶಿಕ್ಷಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪರಿಶೀಲಿಸಲಾಯಿತು ಹಾಗೂ ಸದರಿ ಶಿಕ್ಷಣ ಮಹಾವಿದ್ಯಾಲಯಕ್ಕೆ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡಲು ತೀರ್ಮಾನಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 154 ಯುಡಿವಿ 2005, ಬೆಂಗಳೂರು, ದಿನಾಂಕ: 12ನೇ ಜುಲೈ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಉಡುಪಿಯ ಡಾ: ಟಿ.ಎಂ.ಎ. ಪೈ ಫೌಂಡೇಷನ್‌ನ ಡಾ: ಟಿ.ಎಂ.ಎ. ಪೈ ಶಿಕ್ಷಣ ಮಹಾವಿದ್ಯಾಲಯಕ್ಕೆ 2007–08ನೇ ಸಾಲಿನಿಂದ ಒಂದು ವರ್ಷದ ಅವಧಿಗೆ ಮಾತ್ರ ಅನ್ವಯವಾಗುವಂತೆ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲಾಗಿದೆ.

ಷರತ್ತುಗಳು:–

1) ಕಾಲೇಜಿಗೆ ನೀಡಲಾಗಿರುವ ಭಾಷಾ ಅಲ್ಪಸಂಖ್ಯಾತ ಸ್ಥಾನಮಾನದಂತೆ ಮಂಜೂರಾದ ವಿದ್ಯಾರ್ಥಿ ಪ್ರಮಾಣದಲ್ಲಿ ಶೇ.75 ರಷ್ಟು ಸೀಟುಗಳಲ್ಲಿ ಕನಿಷ್ಟ ಶೇ.50 ರಷ್ಟು ಸೀಟುಗಳನ್ನು ಸದರಿ ಭಾಷಾ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಹಾಗೂ ಉಳಿದ ಶೇ.25 ರಷ್ಟು ಸೀಟುಗಳನ್ನು ಭಾಷಾ ಅಥವಾ ಇತರೆ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಭರ್ತಿ ಮಾಡತಕ್ಕದ್ದು. ಯಾವುದೇ ಸೀಟುಗಳು ಭರ್ತಿಯಾಗದೇ ಉಳಿದಲ್ಲಿ ಪ್ರವೇಶ ಪರೀಕ್ಷೆ ಮುಕ್ತಾಯವಾಗುವ ಮುನ್ನಾ ಕೇಂದ್ರೀಕೃತ ದಾಖಲಾತಿ ಘಟಕಕ್ಕೆ ಸರಂಡರ್ ಮಾಡತಕ್ಕದ್ದು.

2) ಕಾಲೇಜಿನ ಆಡಳಿತ ಮಂಡಳಿಯು ಮೀಸಲಿರಿಸಿದ ಸೀಟುಗಳಿಗೆ ಭಾಷಾ ಮತೀಯ ಅಲ್ಪಸಂಖ್ಯಾತ ವಿದ್ಯಾರ್ಥಿಗಳನ್ನು ದಾಖಲಿಸಿಕೊಂಡಿರುವ ಬಗ್ಗೆ ಮಾಹಿತಿಯನ್ನು ಡಿ.ಎಸ್.ಇ.ಆರ್.ಟಿ. ಗೆ ನೀಡತಕ್ಕದ್ದು.

3) ಮೇಲೆ ತಿಳಿಸಿರುವ ಷರತ್ತುಗಳನ್ನು ಕಾಲೇಜಿನ ಆಡಳಿತ ಮಂಡಳಿಯು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಮತ್ತು ಯಾವುದೇ ರೀತಿಯ ಉಲ್ಲಂಘನೆಯನ್ನು ಮಾಡಿದಲ್ಲಿ ಮಂಜೂರು ಮಾಡಲಾದ ಅಲ್ಪಸಂಖ್ಯಾತ ಸ್ಥಾನಮಾನವನ್ನು ಹಿಂಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಬಿ. ಉಳವಿ**

ಪಿ.ಆರ್. 1305

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಒಇ 328 ಪಿಪಿಇ 2007, ಬೆಂಗಳೂರು, ದಿನಾಂಕ: 13ನೇ ಜುಲೈ 2007**

ದಿನಾಂಕ: 16.5.2007ರ ಸರ್ಕಾರದ ಆದೇಶ ಸಂಖ್ಯೆ: ಒಇ 452 ಪಿಪಿಇ 2007 ಆದೇಶದ ವಿಷಯದ ಭಾಗದಲ್ಲಿ "2ನೇ ಸಾಲಿನಲ್ಲಿ", ಪ್ರಸ್ತಾವನೆಯ "ಖಂಡಿಕೆ 1ರ 3ನೇ ಸಾಲಿನಲ್ಲಿ" ಮತ್ತು "ಆದೇಶದ ಭಾಗದ 2ನೇ ಸಾಲಿನಲ್ಲಿ" "ಶಹಪುರ" ಎಂಬುದರ ಬದಲಾಗಿ "ಶಿಕಾರಿಪುರ" ಎಂದು ಓದಿಕೊಳ್ಳುವುದು. ಉಳಿದಂತೆ ದಿನಾಂಕ: 16.05.2007ರ ಸರ್ಕಾರದ ಆದೇಶ ಸಂಖ್ಯೆ: ಒಇ 452 ಪಿಪಿಇ 2007 ರಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1309

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು)

**ತಿದ್ದುಪಡಿ**

**ಸಂಖ್ಯೆ: ಒಇ 314 ಪಿಪಿಇ 2007, ಬೆಂಗಳೂರು, ದಿನಾಂಕ: 11ನೇ ಜುಲೈ 2007**

ದಿನಾಂಕ: 17.4.2007ರ ಅಧಿಸೂಚನೆ ಸಂಖ್ಯೆ: ಒಇ 159 ಪಿಪಿಇ 2007 ರಲ್ಲಿನ ತಃಖ್ತೆಯ ಕ್ರಮ ಸಂಖ್ಯೆ 7 ರಲ್ಲಿನ ಅಂಕಣ 3 ರಲ್ಲಿ ನಮೂದಿಸಿರುವ "60/06" ಎಂಬುದರ ಬದಲಾಗಿ "60/05" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ದಿನಾಂಕ: 8.5.07ರ ಅಧಿಸೂಚನೆ ಸಂಖ್ಯೆ: ಒಇ 210 ಪಿಪಿಇ 2007 ರಲ್ಲಿನ ತಃಖ್ತೆಯ ಕ್ರಮ ಸಂಖ್ಯೆ 12 ರಲ್ಲಿನ ಅಂಕಣ 4 ರಲ್ಲಿ ನಮೂದಿಸಿರುವ "764/04" ಎಂಬುದರ ಬದಲಾಗಿ "763/04" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1310

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು)

**ಯೋಜನೆ ಹಾಗೂ ಸಾಂಖ್ಯಿಕ ಸಚಿವಾಲಯ**

**ವಿಷಯ:** ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನಾ ಇಲಾಖೆ, ಇವರನ್ನು ರಾಜ್ಯ ಯೋಜನಾ ಮಂಡಳಿಯ ಪದನಿಮಿತ್ತ ಸದಸ್ಯ ಕಾರ್ಯದರ್ಶಿ ಎಂದು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಮಾನ್ಯ ಉಪಾಧ್ಯಕ್ಷರು, ರಾಜ್ಯ ಯೋಜನಾ ಮಂಡಳಿ, ಇವರ ಟಿಪ್ಪಣಿ ಸಂಖ್ಯೆ: ಎಸ್‌ಪಿಬಿ/ಡಿವೈಸಿ/ 44/2007, ದಿನಾಂಕ: 01.06.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಟಿಪ್ಪಣಿಯಲ್ಲಿ ರಾಜ್ಯ ಯೋಜನಾ ಮಂಡಳಿಯ ಮಾನ್ಯ ಉಪಾಧ್ಯಕ್ಷರು, ರಾಜ್ಯ ಯೋಜನಾ ಮಂಡಳಿಯಲ್ಲಿ ಪಂಚವಾರ್ಷಿಕ ಯೋಜನೆ ಹಾಗೂ ವಾರ್ಷಿಕ ಯೋಜನೆಗಳ ಬಗ್ಗೆ ಮಾರ್ಗದರ್ಶಿಗಳನ್ನು ರೂಪಿಸುವುದು ಮತ್ತು ಕಾರ್ಯಗತಗೊಳಿಸುವುದು, ರಾಜ್ಯದಲ್ಲಿ ಹೂಡಿಕೆಗಳ ಬಗ್ಗೆ ಸುಧಾರಣೆ ಕುರಿತು ಸಲಹೆಗಳನ್ನು ಮತ್ತು ಯೋಜನಾ ಕಾರ್ಯಕ್ರಮಗಳನ್ನು ಪರಿಶೀಲನೆ ಮಾಡಿ ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರುವಂತಾಗಲು ಸೂಚನೆಗಳನ್ನು ನೀಡುವುದು ಇತ್ಯಾದಿ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕಾಗಿದೆ ಎಂದು ತಿಳಿಸಿ, ಈ ಮಂಡಳಿಯಲ್ಲಿ ಪೂರ್ಣಾವಧಿಯಲ್ಲಿ ಕಾರ್ಯನಿರ್ವಹಿಸುವಂತಹ ಸದಸ್ಯರುಗಳಾಗಲಿ ಅಥವಾ ಅರ್ಹತೆಯುಳ್ಳ ಸಿಬ್ಬಂದಿಗಳು ಇಲ್ಲದೆ ಕೊರತೆಯನ್ನು ಎದುರಿಸುತ್ತಿರುವ ಹಿನ್ನೆಲೆಯಲ್ಲಿ ರಾಜ್ಯ ಯೋಜನಾ ಮಂಡಳಿಯನ್ನು ಸಶಕ್ತಗೊಳಿಸಲು ಅನುಭವಿಗಳು ಮತ್ತು ಸಂಶೋಧನ ವ್ಯಕ್ತಿಗಳಿಂದ ತುಂಬಿದರೆ ಪರಿಣಾಮಕಾರಿಯಾದ ಪಾತ್ರವನ್ನು ನ್ಯಾಯಸಮ್ಮತವಾಗಿ ನೆರವೇರಿಸಲು ಸಾಧ್ಯವಾಗುತ್ತದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿ, ಸಧ್ಯದ ಹಂತದಲ್ಲಿ ಪೂರ್ಣಾವಧಿಯ ಒಬ್ಬ ಹಿರಿಯ ಐ.ಎ.ಎಸ್. ಅಧಿಕಾರಿಯನ್ನು ಮಂಡಳಿಯ ಸದಸ್ಯ ಕಾರ್ಯದರ್ಶಿಯಾಗಿ ನೇಮಕ ಮಾಡುವ ಬದಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನಾ ಇಲಾಖೆ, ಇವರನ್ನು ಪದನಿಮಿತ್ತ ಸದಸ್ಯ ಕಾರ್ಯದರ್ಶಿ ಎಂದು ರಾಜ್ಯ ಯೋಜನಾ ಮಂಡಳಿಗೆ ನೇಮಕ ಮಾಡಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಪ್ರಸ್ತಾವನೆಗೆ ಮುಖ್ಯ ಕಾರ್ಯದರ್ಶಿಯವರ ಮುಖೇನ ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆ ಪಡೆಯಲಾಗಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಿಡಿ 50 ಪಿಎಂಎಂ 2007, ಬೆಂಗಳೂರು, ದಿನಾಂಕ: 2ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನಾ ಹಾಗೂ ಸಾಂಖ್ಯಿಕ ಇಲಾಖೆ, ಇವರನ್ನು ರಾಜ್ಯ ಯೋಜನಾ ಮಂಡಳಿಗೆ "ಪದನಿಮಿತ್ತ ಸದಸ್ಯ ಕಾರ್ಯದರ್ಶಿ" ಎಂದು ಸರ್ಕಾರ ನೇಮಕ ಮಾಡಿದೆ.

ಈ ಆದೇಶವನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಸಿಎಸ್/1935, ದಿನಾಂಕ: 04.06.2007 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಶಿವಸ್ವಾಮಿ**

ಪಿ.ಆರ್. 1311

ಸರ್ಕಾರದ ಅಧೀನ ಕಾರ್ಯದರ್ಶಿ–1 ಮತ್ತು 2 (ಪ್ರ),
ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ.

**ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ**

**ವಿಷಯ:** ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆಯ (ಐಡೆಕ್) ಯೋಜನಾ ಅಭಿವೃದ್ಧಿ ನಿಧಿ (PDF) ಹಾಗೂ ಯೋಜನಾ ಬಂಡವಾಳ ನಿಧಿ (PIF) ಗಳಿಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಮೂಅಇ 2 ರಾಅವಿ 2001, ದಿನಾಂಕ: 20.03.2001.
2) ಸರ್ಕಾರದ ಆದೇಶ ಸಂಖ್ಯೆ: ಮೂಅಇ 124 ಮೂಇವಿ 2000, ದಿನಾಂಕ: 06.10.2001.
3) ಸರ್ಕಾರದ ಆದೇಶ ಸಂಖ್ಯೆ: ಮೂಅಇ 81 ಮೂಇವಿ 2002, ದಿನಾಂಕ: 06.07.2002.
4) ಸರ್ಕಾರದ ಆದೇಶ ಸಂಖ್ಯೆ: ಮೂಅಇ 148 ಮೂಇವಿ 2002, ದಿನಾಂಕ: 22.10.2002.
5) ಸರ್ಕಾರದ ಆದೇಶ ಸಂಖ್ಯೆ: ಮೂಅಇ 148 ಮೂಇವಿ 2002, ದಿನಾಂಕ: 1.02.2003.
6) ಸರ್ಕಾರದ ಆದೇಶ ಸಂಖ್ಯೆ: ಮೂಅಇ 148 ಮೂಇವಿ 2002, ದಿನಾಂಕ: 31.03.2003.
7) ಸರ್ಕಾರದ ಆದೇಶ ಸಂಖ್ಯೆ: ಮೂಅಇ 29 ಮೂಇವಿ 2002 (P), ದಿನಾಂಕ: 4.11.2003.
8) ಸರ್ಕಾರದ ಆದೇಶ ಸಂಖ್ಯೆ: ಮೂಅಇ 63 ರಾರಾಹೆ 2003, ದಿನಾಂಕ: 14.09.2004.
9) ಸರ್ಕಾರದ ಆದೇಶ ಸಂಖ್ಯೆ: ಮೂಅಇ 74 ರಾರಾಹೆ 2005, ದಿನಾಂಕ: 10.3.2006.
10) ಸರ್ಕಾರದ ಆದೇಶ ಸಂಖ್ಯೆ: ಮೂಅಇ 74 ರಾರಾಹೆ 2005, ದಿನಾಂಕ: 10.10.2006.
11) ವ್ಯವಸ್ಥಾಪಕ ನಿರ್ದೇಶಕರು ಹಾಗೂ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಐಡೆಕ್ ಇವರ ಪತ್ರ ಸಂಖ್ಯೆ: IDeCK/2007-08, ದಿನಾಂಕ: 01.06.2007.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ 1 ರಿಂದ 10 ರಲ್ಲಿ ಓದಲಾಗಿರುವ ಸರ್ಕಾರದ ಆದೇಶಗಳಡಿಯಲ್ಲಿ ಕರ್ನಾಟಕ ಸರ್ಕಾರವು ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆ (ಐಡೆಕ್)ಗೆ ಷೇರುದಾರರ ಒಪ್ಪಂದದಲ್ಲಿ ಅವಕಾಶವಿರುವಂತೆ ಐಡೆಕ್‌ನ ಯೋಜನಾ ಅಭಿವೃದ್ಧಿ ಹಾಗೂ ಯೋಜನಾ ಬಂಡವಾಳ ನಿಧಿಗಳಿಗೆ (PDF & PIF) ಮೂಲಸೌಲಭ್ಯ ಉಪಕ್ರಮ ನಿಧಿ (IIF) ಯಿಂದ ರಾಜ್ಯದಲ್ಲಿನ ಆಯ್ದ ಹಾಗೂ ಐಡೆಕ್‌ನ ಕಾರ್ಯಕಾರಿ ಸಮಿತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಿಂದ ಅನುಮೋದನೆಗೊಂಡ ರಾಜ್ಯದ ಮೂಲಸೌಲಭ್ಯ ಯೋಜನೆಗಳ ಅಭಿವೃದ್ಧಿಗಾಗಿ ಐಡೆಕ್ ಸಂಸ್ಥೆಯು ಭಾಗವಹಿಸಲು ಸರ್ಕಾರವು ಇದುವರೆವಿಗೂ ಒಟ್ಟಾರೆ ರೂ.27.85 ಕೋಟಿಗಳ ಅನುದಾನವನ್ನು ಆಯವ್ಯಯದಿಂದ ಬಿಡುಗಡೆ ಮಾಡಿರುತ್ತದೆ.

2. ಕ್ರಮ ಸಂಖ್ಯೆ 11 ರಲ್ಲಿ ಓದಲಾಗಿರುವ ವ್ಯವಸ್ಥಾಪಕ ನಿರ್ದೇಶಕರು ಹಾಗೂ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಐಡೆಕ್ ಇವರ ಪತ್ರಗಳಲ್ಲಿ ಪ್ರಸ್ತುತ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ.50.00 ಲಕ್ಷಗಳ ಒದಗಣೆಯನ್ನು ಐಡೆಕ್ ಸಂಸ್ಥೆಗೆ ರಾಜ್ಯದಲ್ಲಿನ ಮುಂದುವರಿದ ಮೂಲಸೌಲಭ್ಯ ಯೋಜನೆಗಳಲ್ಲಿ ತೊಡಗಿಸಲು ಅತ್ಯಗತ್ಯವಾಗಿ ಬೇಕಾಗಿರುತ್ತದೆಂದು, ಅಭಿವೃದ್ಧಿ ಯೋಜನೆಗಳಾದ ಬೆಂಗಳೂರು ಮೈಸೂರು ರಾಜ್ಯ ಹೆದ್ದಾರಿ ಪಕ್ಕ ಸರ್ವೀಸ್ ರಸ್ತೆ, ಬಳ್ಳಾರಿ ಬೈಪಾಸ್ ರಸ್ತೆ ಮತ್ತು ಕೆಮ್ಮಣ್ಣುಗುಂಡಿ, ಮರವಂತೆ, ಬೇಲೂರು ಮತ್ತು ಪಟ್ಟದಕಲ್ ಪ್ರದೇಶಗಳಲ್ಲಿ ಪ್ರವಾಸೋದ್ಯಮ ಯೋಜನಾ ಅಭಿವೃದ್ಧಿ ಪ್ರಸ್ತಾವನೆಗಳಿಗೆ ದಿನಾಂಕ: 19.7.2006 ರಂದು ನಡೆದ ಬೋರ್ಡ್ ಆಫ್ ಡೈರೆಕ್ಟರ್‌ಗಳ ಸಭೆಯಲ್ಲಿ ಅನುಮೋದನೆ ನೀಡಿರುವ ಹಿನ್ನಲೆಯಲ್ಲಿ ಹಣ ತೊಡಗಿಸಬೇಕಾಗಿರುವುದರಿಂದ 2007–08ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ.50.00 ಲಕ್ಷಗಳನ್ನು ಶೀಘ್ರವಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. 2006–07ನೇ ಸಾಲಿನಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಯೋಜನೆಗಾಗಿ ಬಿಡುಗಡೆಯಾದ ರೂ.50.00 ಲಕ್ಷಗಳನ್ನು ಬಳಕೆ ಮಾಡಿದ ಬಗ್ಗೆ ವಿವರಗಳನ್ನು ದಿನಾಂಕ: 01.06.2007ರ ತಮ್ಮ ಪತ್ರದಲ್ಲಿ ಐಡೆಕ್ ಸಂಸ್ಥೆಯು ಒದಗಿಸಿದೆ.

3. ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮೂಅಇ 62 ರಾರಾಹೆ 2007, ಬೆಂಗಳೂರು, ದಿನಾಂಕ: 4ನೇ ಜುಲೈ 2007**

ಮೇಲೆ ವಿವರಿಸಿದಂತೆ 2007–08ನೇ ಸಾಲಿನಲ್ಲಿ ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆಯು (iDeCK) ರಾಜ್ಯದ ಅನುಮೋದಿತ ಮೂಲಸೌಲಭ್ಯ ಯೋಜನೆಗಳ ಅಭಿವೃದ್ಧಿ ವೆಚ್ಚ ಹಾಗೂ ಬಂಡವಾಳ ವೆಚ್ಚಗಳನ್ನು ತೂಗಿಸಲು ಅನುಕೂಲವಾಗುವಂತೆ, 2007–08ನೇ ಸಾಲಿನಲ್ಲಿ ಒದಗಿಸಿರುವ ರೂ.50.00 ಲಕ್ಷಗಳನ್ನು (ರೂ.ಐವತ್ತು ಲಕ್ಷಗಳು) ಮಾತ್ರ ಸದರೀ ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 5465–01–190–1–01–211 ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆ ನಿಯಮಿತ (ಐಡೆಕ್) ಬಂಡವಾಳ (ಯೋಜನೆ)–2007–08 ಇದರಿಂದ ಭರಿಸತಕ್ಕದ್ದು.

3. ಮುಖ್ಯ ವಿತ್ತೀಯಾಧಿಕಾರಿ ಹಾಗೂ ಕಂಪನಿ ಕಾರ್ಯದರ್ಶಿ, ಐಡೆಕ್, ಬೆಂಗಳೂರು ಇವರು Payees ರಸೀಧಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವನ್ನು ಪಡೆದು ಈ ಮೊತ್ತವನ್ನು ಪಡೆದುಕೊಳ್ಳಲು ಅಧಿಕಾರವನ್ನು ನೀಡಲಾಗಿದೆ.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1064 ವೆಚ್ಚ–I/07, ದಿನಾಂಕ: 29.06.2007 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 1314 ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ರೇಷ್ಮೆ ಇಲಾಖೆಯ ಬಿತ್ತನೆಕೋಠಿ ಚಿಕ್ಕೋನಹಳ್ಳಿಯ ಕಟ್ಟಡಗಳನ್ನು ಮೊರಾರ್ಜಿ ದೇಸಾಯಿ ವಸತಿ ಶಾಲೆಗೆ ಬಾಡಿಗೆ ಆಧಾರದ ಮೇಲೆ ನೀಡುವ ಬಗ್ಗೆ.

**ಓದಲಾಗಿದೆ:** 1) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸರೇಕೃಕ್ಷೇ/ಹೊಸಿಗೆಕಾವಲ್/ಜಮೀನು/12/06–07, ದಿನಾಂಕ: 29.9.2006 ಹಾಗೂ 26.5.2007.

2) ಸರ್ಕಾರ ಆದೇಶ ಸಂಖ್ಯೆ: ವಾಕೈ 35 ರೇಯೋವಿ 2006, ದಿನಾಂಕ: 25.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ: 29.9.2006ರ ಪತ್ರದಲ್ಲಿ ರೇಷ್ಮೆ ಇಲಾಖೆಯು ಕೋರಿದ್ದಂತೆ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಹೊಸಿಗೆಕಾವಲ್‌ನಲ್ಲಿ ಖಾಲಿ ಇರುವ ಮಾದರಿ ಚಾಕಿ ಸಾಕಾಣಿಕೆ ಕೇಂದ್ರದ ಕಟ್ಟಡ ಹಾಗೂ 14 ವಸತಿ ಗೃಹಗಳನ್ನು ಸಾಮಾನ್ಯ ಬಾಡಿಗೆ ಆಧಾರದ ಮೇಲೆ ಮೊರಾರ್ಜಿ ವಸತಿ ಶಾಲೆ ಪ್ರಾರಂಭಿಸಲು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಗೆ ನೀಡಲು ಕ್ರಮಸಂಖ್ಯೆ (2) ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. ಅದರಂತೆ, ಮೊರಾರ್ಜಿ ದೇಸಾಯಿ ವಸತಿ ಶಾಖೆಗೆ ನೀಡಬಹುದಾದ ಕಟ್ಟಡಗಳಲ್ಲಿ ಯಾವುದೇ ಮೂಲಭೂತ ಸೌಕರ್ಯಗಳು ಹಾಗೂ ಕುಡಿಯುವ ನೀರಿನ ಲಭ್ಯತೆ ಇಲ್ಲದೆ ಇರುವುದರಿಂದ ಅದರ ಬದಲು ರೇಷ್ಮೆ ಬಿತ್ತನೆ ಕೋಠಿ, ಚಿಕ್ಕೋನಹಳ್ಳಿಯ ಕಟ್ಟಡವನ್ನು ಬಿಟ್ಟುಕೊಡುವಂತೆ ಜಿಲ್ಲಾಧಿಕಾರಿಗಳು, ಹಿಂದುಳಿದ ವರ್ಗಗಳ ಇಲಾಖೆಯ ಇವರು ಕೋರಿದ್ದು, ಮಾನ್ಯ ಶಾಸಕರು, ಹುಲಿಯೂರು ದುರ್ಗ ಇವರು ಈ ಕಟ್ಟಡವನ್ನು ಬಿಟ್ಟುಕೊಡುವಂತೆ ಮೌಖಿಕವಾಗಿ ಸೂಚಿಸಿದ್ದರ ಮೇರೆಗೆ ಸದರಿ ಕಟ್ಟಡದಲ್ಲಿ ಇಲಾಖೆಯ ಯಾವುದೇ ಚಟುವಟಿಕೆಗಳು ನಡೆಯುತ್ತಿಲ್ಲವಾದ್ದರಿಂದ ರೇಷ್ಮೆ ಕೃಷಿ ಕ್ಷೇತ್ರ, ಹೊಸಿಗೆಕಾವಲ್ ಇಲ್ಲಿನ ಕಟ್ಟಡಗಳ ಬದಲು ಬಿತ್ತನೆಕೋಠಿ, ಚಿಕ್ಕೋನಹಳ್ಳಿಯ ಕಟ್ಟಡವನ್ನು ದಿನಾಂಕ: 5.1.2007 ರಂದು ಹಿಂದುಳಿದ ವರ್ಗಗಳ ಇಲಾಖೆಗೆ ರೇಷ್ಮೆ ಜಂಟಿ ನಿರ್ದೇಶಕರು, ಬಿಳಿದೇವಾಲಯ ಇವರು ನೀಡಿರುವುದಾಗಿ ತಿಳಿಸಿ, ರೇಷ್ಮೆ ಜಂಟಿ ನಿರ್ದೇಶಕರು, ಬಿಳಿದೇವಾಲಯ ಇವರು ಕೈಗೊಂಡ ಕ್ರಮವನ್ನು ಅನುಮೋದಿಸಿ, ಸರ್ಕಾರಿ ಬಿತ್ತನೆಕೋಠಿ, ಚಿಕ್ಕೋನಹಳ್ಳಿಯ ಕಟ್ಟಡವನ್ನು ಹಿಂದುಳಿದ ವರ್ಗಗಳ ಇಲಾಖೆಗೆ ನೀಡಬಹುದಾಗಿದೆ ಎಂದು ಅಭಿಪ್ರಾಯ ಪಟ್ಟು, ಈ ಕುರಿತು ಸೂಕ್ತ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 26.5.2007ರ ಪತ್ರದಲ್ಲಿ ರೇಷ್ಮೆ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ಈ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ರೇಷ್ಮೆ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಹೊಸಿಗೆಕಾವಲ್‌ನ ಕಟ್ಟಡಗಳ ಬದಲು ಬಿತ್ತನೆಕೋಠಿ, ಚಿಕ್ಕೋನಹಳ್ಳಿಯ ಕಟ್ಟಡವನ್ನು ಹಿಂದುಳಿದ ವರ್ಗಗಳ ಇಲಾಖೆಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 35 ರೇಯೋವಿ 2006, ಬೆಂಗಳೂರು, ದಿನಾಂಕ: 13ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ. ರೇಷ್ಮೆ ಇಲಾಖೆಯ ರೇಷ್ಮೆ ಬಿತ್ತನೆಕೋಠಿ, ಚಿಕ್ಕೋನಹಳ್ಳಿಯ ಕಟ್ಟಡವನ್ನು ಸಾಮಾನ್ಯ ಬಾಡಿಗೆ ಆಧಾರದ ಮೇಲೆ ಮೊರಾರ್ಜಿ ದೇಸಾಯಿ ವಸತಿ ಶಾಲೆ ಪ್ರಾರಂಭಿಸುವುದಕ್ಕಾಗಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಗೆ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪಿ.ಆರ್. 1315 ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಕಂದಾಯ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಆರ್‌ಡಿ 74 ಎಡಿಇ 2006, ಬೆಂಗಳೂರು, ದಿನಾಂಕ: 10ನೇ ಜುಲೈ 2007**

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 74 ಎಡಿಇ 2006, ದಿನಾಂಕ: 13.6.2007ರ ಆದೇಶ ಭಾಗದ ನಾಲ್ಕನೇ ಮತ್ತು ಐದನೇ ಸಾಲಿನಲ್ಲಿ "ಎಸ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ:2211, ಹೆಚ್.ಎ.ಎಲ್. 3ನೇ ಹಂತ, 80 ಅಡಿ ರಸ್ತೆ, ಕೋಡಿಹಳ್ಳಿ ಕ್ರಾಸ್, ಬೆಂಗಳೂರು" ಎಂಬುದರ ಬದಲಿಗೆ **ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ:415/2, "ಎಫ್" ಬ್ಲಾಕ್, ಸಹಕಾರ ನಗರ, ಬೆಂಗಳೂರು–560 092** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1316 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಕೆ.ಎಸ್. ಹೊಸಮನಿ, ತಹಶೀಲ್ದಾರ್, ಇವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 21 ಎಡಿಇ 2007, ದಿನಾಂಕ: 4.6.2007.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 4.6.2007ರ ಸರ್ಕಾರಿ ಆದೇಶದಲ್ಲಿ ಶ್ರೀ ಕೆ.ಎಸ್.ಹೊಸಮನಿ, ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾನುಸಾರ 1957ರ ನಿಯಮ 10(1) (ಡಿ) ರಡಿಯಲ್ಲಿ, ಸದರಿ ಆದೇಶದಲ್ಲಿ ತಿಳಿಸಿರುವ ಕಾರಣಗಳಿಗಾಗಿ ಸದರಿಯವರನ್ನು ಇಲಾಖಾ ವಿಚಾರಣೆ ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಈ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ಹೂಡಲು ಅನುಬಂಧ 1 ರಿಂದ 4 ರ ವರೆಗೆ ಆರೋಪ ಪಟ್ಟಿ ಕಳುಹಿಸಿಕೊಡುವಂತೆ ಕೋರಿ ಜಿಲ್ಲಾಧಿಕಾರಿಗಳು, ಕೊಪ್ಪಳ ಇವರಿಗೆ ದಿನಾಂಕ: 12.6.2007 ರಲ್ಲಿ ಪತ್ರ ಬರೆಯಲಾಗಿದೆ. ಈ ಮಧ್ಯೆ ವಿಷಯವನ್ನು ಪುನರ್ ಅವಲೋಕಿಸಿ, ಅವರನ್ನು ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಲು ಸರ್ಕಾರವು ನಿರ್ಧರಿಸಿರುವುದರಿಂದ ಈಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 21 ಎಡಿಇ 2007, ಬೆಂಗಳೂರು, ದಿನಾಂಕ: 13ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣ, ಸರ್ಕಾರವು ಅಮಾನತ್ತಿನಲ್ಲಿರುವ ಶ್ರೀ ಕೆ.ಎಸ್.ಹೊಸಮನಿ, ತಹಶೀಲ್ದಾರ್, ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಕೂಡಲೇ ಜಾರಿಗೆ ಬರುವಂತೆ ಅವರನ್ನು ಅಮಾನತ್ತಿನಿಂದ ತೆರವುಗೊಳಿಸಿ ಹಾಲಿ ಖಾಲಿಯಿರುವ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಕೊಪ್ಪಳ ಇಲ್ಲಿಗೆ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1317 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**PERSONNEL AND ADMINISTRATIVE REFORMS SECRETARIAT**

**Subject:** Extension of tenure of deputation of Lt. Vikas Guleria (05000N) as ADC to the Governor of Karnataka upto 07.03.2007.

**Read:**
1) Government Notification No. DPAR 69 PRB 2004, dated: 01.01.2005.
2) Government Order No. DPAR 69 PRB 2004, dated: 27.04.2005 and Addendum No. DPAR 28 PRB 2005, dated: 28.01.2006.
3) Government Order DPAR 01 PRB 2007, dated: 13.02.2007.
4) Letter No. GS 101 EST 2004, dated: 12.06.2007 from the Secretary to Governor of Karnataka.

**PREAMBLE:**

In Government Notification dated: 01.01.2005 read at (1) above, Lt. Vikas Guleria, (05000N) of the Indian Navy has been appointed as ADC to Governor of Karnataka.

In the Govt. order read at (2) above, sanction was accorded to the terms and conditions of deputation of Lt. Vikas Guleria as ADC to Governor for a period of two years with effect from the forenoon of 01.01.2005. As such his period of deputation of two years expired on 31.12.2006.

In the Govt. order read at (3) above, the tenure of deputation of Lt. Vikas Guleria as ADC to Governor has been extended upto 28.02.2007 under the existing terms and Conditions.

In the letter read at (4) above, the Secretary to Governor has stated that His excellency the Governor of Karnataka has instructed that Lt. Vikas Guleria, be continued till 07.03.2007, as the new incumbent to the post of ADC was yet to assume the charge and hence requested the Govt. to issue necessary orders extending the tenure of deputation of Lt. Vikas Guleria (05000N) as ADC to the Governor of Karnataka upto 07.03.2007 under the same terms and conditions.

**GOVERNMENT ORDER No. DPAR 17 PRB 2007, Bangalore, Dated: 13th July 2007**

Government are pleased to extend the tenure of deputation of Lt. Vikas Guleria (05000N) as ADC to the Governor of Karnataka upto 07.03.2007 under the existing terms and conditions.

This order issues as per the powers delegated to the Principal Secretaries/Secretaries to Government vide G.O.No. FD 1 TFP 96, dated: 10.07.1996.

By Order and in the name of the Governor of Karnataka,

**B. VEERANNA**

PR- 1320 Under Secretary to Government,

Department of Personnel and Administrative Reforms (Political).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯದಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ 2007–08ನೇ ಸಾಲಿನ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ – ಸಮಿತಿ ರಚನೆ.

**ಓದಲಾಗಿದೆ:**
1) ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಆರ್/ಎಸ್–1 & ಎಸ್–10/ಯುಜಿ ಎಡಿಎಂಎನ್/ಪಿಟಿ/2007–08, ದಿನಾಂಕ: 18.5.2007.
2) ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಆರ್/ಎಸ್–1 & ಎಸ್–11/ಯುಜಿ ಎಡಿಎಂಎನ್/ಪಿಟಿ/2007–08, ದಿನಾಂಕ: 8.6.2007.

**ಪ್ರಸ್ತಾವನೆ:**

ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಕುಲಸಚಿವರು ಮೇಲೆ ಓದಲಾದ (1) ಮತ್ತು (2)ರ ಪತ್ರಗಳಲ್ಲಿ 2007–08ನೇ ಸಾಲಿನಲ್ಲಿ ಕೃಷಿಕರ ಮತ್ತು ಕೃಷಿಕರ ಮಕ್ಕಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿಯನ್ನು ರಚಿಸುವಂತೆ ಕೋರಿರುತ್ತಾರೆ. ಸದರಿ ಸಮಿತಿಯಲ್ಲಿ ಡಾ: ಆರ್.ಗೋವಿಂದನ್, ನಿರ್ದೇಶಕರು, ಶಿಕ್ಷಣ (ಅಗ್ರಿ), ಕೃಷಿ ಕಾಲೇಜು, ಜಿ.ಕೆ.ವಿ.ಕೆ, ಬೆಂಗಳೂರು ರವರನ್ನು ಅಧ್ಯಕ್ಷರನ್ನಾಗಿ ನೇಮಿಸಲು ವಿನಂತಿಸಿರುತ್ತಾರೆ. ಸದರಿ ಪ್ರಸ್ತಾವನೆ ಪರಿಶೀಲಿಸಿದ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 63 ಕೃವಿವಿ 2003 (ಭಾಗ–1), ಬೆಂಗಳೂರು, ದಿನಾಂಕ: 21ನೇ ಜೂನ್ 2007**

ಬೆಂಗಳೂರು ಕೃಷಿ ವಿಶ್ವವಿದ್ಯಾಲಯದಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ 2007–08ನೇ ಸಾಲಿನ ಪದವಿ ಕೋರ್ಸ್‌ಗಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕೆ ಈ ಕೆಳಕಂಡಂತೆ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಲಾಗಿದೆ.

| | | |
|---|---|---|
| 1) | ಡಾ: ಆರ್. ಗೋವಿಂದನ್, ನಿರ್ದೇಶಕರು, ಶಿಕ್ಷಣ (ಕೃಷಿ) | ಅಧ್ಯಕ್ಷರು |
| 2) | ಜಂಟಿ ನಿರ್ದೇಶಕರು, ವಿಸ್ತರಣೆ ಮತ್ತು ತರಬೇತಿ, ಕೃಷಿ ಇಲಾಖೆ, ಬೆಂಗಳೂರು | ಸದಸ್ಯರು |
| 3) | ಜಂಟಿ ನಿರ್ದೇಶಕರು, ಜಾನುವಾರು ಮತ್ತು ಅಭಿವೃದ್ಧಿ, ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 1326 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಸಿ.ಕೆ. ಮುನಿಭೈರಪ್ಪ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ), ಕೋಲಾರ ವಿರುದ್ಧ ಶಿಸ್ತು ಕ್ರಮ–ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಕದ ಬಗ್ಗೆ.

**ಓದಲಾಗಿದೆ:**
1) ತೋಟಗಾರಿಕೆ ನಿರ್ದೇಶಕರ ಪತ್ರದ ಸಂಖ್ಯೆ: ತೋಇ/ಆ/ಸಿ:10–2/40/04–05, ದಿನಾಂಕ: 26/29.07.2006.
2) ಸರ್ಕಾರ ಹೊರಡಿಸದ ನೋಟೀಸು ಸಂಖ್ಯೆ: ಕೃತೋಇ 222 ತೋಸೇಪ 2006, ದಿನಾಂಕ: 12.12.2006.
3) ತೋಟಗಾರಿಕೆ ನಿರ್ದೇಶಕರ ಕಛೇರಿ ಆದೇಶ ಸಂಖ್ಯೆ: ತೋಇ/ಆ/ಸಿ:10–2/40/04–05, ದಿನಾಂಕ: 15/16.12.2006.
4) ತೋಟಗಾರಿಕೆ ನಿರ್ದೇಶಕರ ಪತ್ರದ ಸಂಖ್ಯೆ: ತೋಇ/ಆ/ಸಿ:10–2/40–04–05, ದಿನಾಂಕ: 13/16.6.2007.

**ಪ್ರಸ್ತಾವನೆ:**

ಶ್ರೀ ಸಿ.ಕೆ. ಮುನಿಭೈರಪ್ಪ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ), ಕೋಲಾರ ಇವರು ಈ ಹಿಂದೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ), ಕೋಲಾರ ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ 2003–04ನೇ ಸಾಲಿನಲ್ಲಿ ಜೋಡಿವಮ್ಮಸಂದ್ರ ಮತ್ತು ಮೂಡಿಕೆರೆ ತೋಟಗಾರಿಕೆ ಕ್ಷೇತ್ರದ ಸಪೋಟ ಮತ್ತು ಮಾವು ಫಸಲಿನ ಹರಾಜಿನ ಪೂರ್ಣ ಮೊತ್ತವನ್ನು ಸರ್ಕಾರಕ್ಕೆ ಜಮಾ ಮಾಡದೇ ಮೇಲೆ (1)ರ ತೋಟಗಾರಿಕೆ ನಿರ್ದೇಶಕರು ಇವರ ವರದಿಯಿಂದ ಹಣ ದುರುಪಯೋಗಪಡಿಸಿಕೊಂಡಿರುವುದು ತಿಳಿದುಬರುತ್ತದೆ.

ಈ ಅಧಿಕಾರಿಗಳ ವಿರುದ್ಧ (3) ಆರೋಪಗಳನ್ನು ಮಾಡಲಾಗಿದೆ. ಆರೋಪ (1) ರಲ್ಲಿ ಹರಾಜು ಮಾಡಲಾದ ಬಿಡ್ ಮೊತ್ತ ರೂ.62,600–00 ಗಳಲ್ಲಿ ರೂ.16600 ಗಳನ್ನು ಮಾತ್ರ ಸರ್ಕಾರಕ್ಕೆ ಜಮೆ ಮಾಡಿ ಉಳಿದ ಮೊತ್ತ ರೂ.4,600–00 ಗಳನ್ನು ದುರುಪಯೋಗಪಡಿಸಿಕೊಂಡಿದ್ದಾರೆ. ಆರೋಪ (2) ರಲ್ಲಿ 2003ನೇ ಸಾಲಿನ ಮೊದಲ ಅವಧಿ ಮಾವು ಫಸಲಿನ ಹರಾಜಿನ ಬಿಡ್ ಮೊತ್ತ ರೂ.71,500–00 ಗಳಲ್ಲಿ ರೂ.18,000–00 ಗಳನ್ನು ಮಾತ್ರ ಸರ್ಕಾರಕ್ಕೆ ಜಮಾ ಮಾಡಿ ಉಳಿದ ರೂ.5,3500–00 ಗಳನ್ನು ದುರುಪಯೋಗಪಡಿಸಿಕೊಂಡಿರುತ್ತಾರೆ.

ಸದರಿ ಅಧಿಕಾರಿಗಳು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ), ಕೋಲಾರ, ಇಲ್ಲಿ ಹುದ್ದೆ ನಿರ್ವಹಿಸುತ್ತಿದ್ದಾಗ ಮೂಡಿಗೆರೆ ತೋಟಗಾರಿಕೆ ಕ್ಷೇತ್ರ 2003ನೇ ಸಾಲಿನ ಮೊದಲು ಅವಧಿಯ ಸಪೋಟ ಫಸಲಿನ ಹರಾಜಿನ ಬಿಡ್ ಮೊತ್ತ ರೂ.52.000–00 ಗಳಲ್ಲಿ ರೂ.13,000–00 ಗಳನ್ನು ಬಿಡ್‌ದಾರರಿಂದ ಪಡೆದು ಸರ್ಕಾರಕ್ಕೆ ಜಮೆ ಮಾಡಿ ಉಳಿದ ಮೊತ್ತ ರೂ.39,000–00 ಗಳನ್ನು

ಬಿಡ್‌ದಾರರಿಂದ ಮೊದಲೇ ಪಡೆದಿದ್ದರೂ ಸಹ ವಿಳಂಬವಾಗಿ ಸರ್ಕಾರಕ್ಕೆ ಜಮೆ ಮಾಡಿ ಸರ್ಕಾರಕ್ಕೆ ತಾತ್ಕಾಲಿಕವಾಗಿ ಹಣ ದುರುಪಯೋಗಪಡಿಸಿಕೊಂಡಿರುವ 3ನೇ ಆರೋಪವಾಗಿದೆ.

ಮೇಲೆ ಓದಲಾದ (2, 3 ಮತ್ತು 4) ರನ್ವಯ ಶ್ರೀ ಸಿ.ಕೆ. ಮುನಿಭೈರಪ್ಪ, ತೋಟಗಾರಿಕೆ ಉಪ ನಿರ್ದೇಶಕರು (ಜಿ.ಪಂ.), ಕೋಲಾರ ಇವರ ಮೇಲೆ ಜಾರಿ ಮಾಡಲಾದ ಕಾರಣ ಕೇಳಿ ನೋಟೀಸಿಗೆ ಅಲ್ಲದೆ ಸರ್ಕಾರದಿಂದ ಹೊರಡಿಸಲಾದ ದೋಷಾರೋಪಣಾ ಪಟ್ಟಿಗೆ (ಅನುಬಂಧ–1 ರಿಂದ 4) ಯಾವುದೇ ರೀತಿಯಲ್ಲಿ ಪ್ರತಿಕ್ರಿಯಿಸಿರುವುದಿಲ್ಲ. ಅಲ್ಲದೆ ತಮ್ಮ ರಕ್ಷಣೆ ಸಂಬಂಧ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಈ ಕೆಳಕಂಡಂತೆ ಆದೇಶಗಳನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 222 ತೋಸೇಪ 2006, ಬೆಂಗಳೂರು, ದಿನಾಂಕ: 29ನೇ ಜೂನ್ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಸಿ.ಕೆ.ಮುನಿಭೈರಪ್ಪ, ತೋಟಗಾರಿಕೆ ಉಪ ನಿರ್ದೇಶಕರು (ಜಿ.ಪಂ.), ಕೋಲಾರ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 11ನೇ ನಿಯಮದ 2ನೇ ಉಪನಿಯಮ ಮತ್ತು 3ನೇ ಉಪನಿಯಮದ (ಸಿ) ಖಂಡದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಿ.ಸಿ.ಎ. ನಿಯಮಾವಳಿಗಳು 1957ರ ನಿಯಮ 11 ರಡಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಅದೇ ನಿಯಮದ 13 ರಡಿ ನಡೆಸಲು ಶ್ರೀ ಎಸ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ವಿ.ಐ.ನಾಯಕ್, ಮ್ಯಾನೇಜರ್, ತೋಟಗಾರಿಕೆ ನಿರ್ದೇಶನಾಲಯ ಇವರನ್ನು ಮಂಡನಾಧಿಕಾರಿಯವರನ್ನಾಗಿ ನೇಮಿಸಲಾಗಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರು ನಿಗದಿಪಡಿಸಿದ ಕಛೇರಿಯ ಆವರಣದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ತೋಟಗಾರಿಕೆ ನಿರ್ದೇಶಕರು ವಿಚಾರಣಾಧಿಕಾರಿಗಳಿಗೆ ಕಛೇರಿಯಲ್ಲಿರುವ ಶೀಘ್ರಲಿಪಿಗಾರರ : ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ಸೂಕ್ತ ಏರ್ಪಾಡು ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ ನಂತರ ನಿಯಮಾನುಸಾರ ಅವರಿಗೆ ತೋಟಗಾರಿಕೆ ನಿರ್ದೇಶಕರು ನಿಗದಿತ ಸಂಭಾವನೆಯನ್ನು ಸಂದಾಯ ಮಾಡತಕ್ಕದ್ದು. ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳಲ್ಲಿ ಪೂರ್ಣಗೊಳಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 1327 ಸರ್ಕಾರದ ಅಧೀನ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ಎಸ್.ಪಿ.ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ ಇವರ ಅಮಾನತ್ತನ್ನು ತೆರವುಗೊಳಿಸುವ ಕುರಿತು.

**ಓದಲಾಗಿದೆ:**
1) ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಪತ್ರ ಗಭೂಇ:ಸಿಬ್ಬಂದಿ.ಅ.2.ಉನಿವ. 2006–07 ದಿನಾಂಕ: 21.02.2007.
2) ಸರ್ಕಾರಿ ಆದೇಶ ಸಂಖ್ಯೆ: ಸಿಐ 25 ಎಂಜಿಎಸ್ 2007, ದಿನಾಂಕ: 02.04.2007.
3) ಶ್ರೀ ಎಸ್.ಪಿ.ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ ಇವರ ಮನವಿ ದಿನಾಂಕ: 16.04.2007.

**ಪ್ರಸ್ತಾವನೆ:**

ಶ್ರೀ ಎಸ್.ಪಿ.ರಾಜು, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ ಇವರು ಕರ್ತವ್ಯಲೋಪ ಎಸಗಿದ್ದಾರೆ ಎಂದು ಕ್ರಮಸಂಖ್ಯೆ 1 ರಲ್ಲಿ ಓದಲಾದ ಪತ್ರದಲ್ಲಿ, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ನೀಡಿದ ವರದಿ:ಶಿಫಾರಸ್ಸನ್ನು ಆಧರಿಸಿ, ಕ್ರಮಸಂಖ್ಯೆ: 2 ರಲ್ಲಿ ಓದಲಾದ ಆದೇಶದಲ್ಲಿ ಅಮಾನತ್ತಿನಲ್ಲಿ ಇಡಲಾಗಿತ್ತು. ಶ್ರೀ ಎಸ್.ಪಿ.ರಾಜು, ಉಪ ನಿರ್ದೇಶಕರು ಇವರು ಕ್ರಮ ಸಂಖ್ಯೆ: 3 ರಲ್ಲಿ ಓದಲಾದ ಮನವಿಯಲ್ಲಿ ಇವರು ಎಲ್ಲಾ ಆರೋಪಗಳನ್ನು ಸ್ಪಷ್ಟವಾಗಿ ನಿರಾಕರಿಸುತ್ತಾ, ತಮ್ಮ ಅಮಾನತ್ತನ್ನು ಕೂಡಲೇ ರದ್ದುಪಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಸದರಿಯವರ ಕೋರಿಕೆಯ ಬಗ್ಗೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಸ್ಪಷ್ಟ ಅಭಿಪ್ರಾಯ ಕೋರಲಾಗಿ, ಸದರಿ ಅಭಿಪ್ರಾಯವನ್ನು ನಿರೀಕ್ಷಿಸಿ, ಈ ಕೆಳಕಂಡ ಆದೇಶ ನೀಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 25 ಎಂಜಿಎಸ್ 2007, ಬೆಂಗಳೂರು, ದಿನಾಂಕ: 16ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಶ್ರೀ ಎಸ್.ಪಿ.ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಸದರಿಯವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆಯನ್ನು ಕಾಯ್ದಿರಿಸಿ, ಇವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್. 1339 ಸರ್ಕಾರದ ಅಧೀನ ಕಾರ್ಯದರ್ಶಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.